# ರಾಷ್ಟ್ರೀಯ ಭಾವೈಕ್ಯ

ಡಾ| ಮುಹಮ್ಮದ್ ಅಬ್ದುಲ್ ಹಕ್ ಅನ್ಸಾರಿ

ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಧರ್ಮವು ರಾಷ್ಟ್ರೀಯ ಭಾವೈಕ್ಯ ಮತ್ತು ಸೌಹಾರ್ದಯತೆಯ ಹಾದಿಯಲ್ಲಿ ಬಲು ದೊಡ್ಡ ತೊಡಕಾಗಿದೆ, ವಿಶೇಷವಾಗಿ ಇಸ್ಲಾಮ್ ಧರ್ಮ ಎಂಬ ಭ್ರಮೆಯನ್ನು ಕೆಲವು ಧರ್ಮ ವಿರೋಧಿ ಶಕ್ತಿಗಳು ಜನಮನದಲ್ಲಿ ಉಂಟು ಮಾಡಿವೆ. ಇಸ್ಲಾಮ್ ಒಂದು ಮೂಲಭೂತವಾದಿ ಧರ್ಮವಾಗಿದ್ದು, ಮುಸ್ಲಿಮರು ಅನ್ಯ ಧರ್ಮಗಳ ಬಗ್ಗೆ ಅಸಹಿಷ್ಣುಗಳಾಗಿದ್ದಾರೆಂಬ ಕುಪ್ರಚಾರವನ್ನೂ ಹರಡಲಾಗಿದೆ. ವಸ್ತುತಃ ಈ ಅಪಪ್ರಚಾರದಲ್ಲಿ ಯಾವುದೇ ಹುರುಳಿಲ್ಲ.

ವಿದ್ವಾಂಸರೂ ಚಿಂತಕರೂ ಆಗಿರುವ ಡಾ| ಅಬ್ದುಲ್ ಹಕ್ ಅನ್ಸಾರಿಯವರು ತಮ್ಮ ಈ ಕಿರುಕೃತಿಯಲ್ಲಿ ಇಸ್ಲಾಮಿನ ವಿರುದ್ಧ ಅಪಪ್ರಚಾರ ನಡೆಸುವವರ ದುರ್ಭಾವನೆಗಳನ್ನು ಆಮೂಲಾಗ್ರವಾಗಿ ವಿಶ್ಲೇಷಿಸಿದ್ದಾರೆ. ಅದರೊಂದಿಗೇ ಹೂಜಿಯೊಳಗೆ ಸಾಗರವೆಂಬಂತಿರುವ ಈ ಕೃತಿಯಲ್ಲಿ, ಇಸ್ಲಾಮಿನ ಶಿಕ್ಷಣವನ್ನು ಉದ್ಧರಿಸುತ್ತಾ, ದೇಶಪ್ರೇಮ ಮತ್ತು ಅನ್ಯಧರ್ಮಗಳನ್ನು ಗೌರವಿಸಲು ಇಸ್ಲಾಮ್ ಆದೇಶಿಸುತ್ತದೆಂಬುದನ್ನೂ ಸೂಚಿಸಿದ್ದಾರೆ.

ಅದೇ ರೀತಿ, 'ಸರ್ವಧರ್ಮ ಸಮಭಾವ'ದ ತಥಾಕಥಿತ ಭಾವನೆಯನ್ನಿರಿಸಿರುವವರ ನೀತಿಯಲ್ಲಿ ಕಾಣುವ ಕೊರತೆಯನ್ನೂ ಲೇಖಕರು ಎತ್ತಿ ತೋರಿಸಿದ್ದಾರೆ. ರಾಷ್ಟ್ರೀಯ ಭಾವೈಕ್ಯ ಮತ್ತು ಸೌಹಾರ್ದ ಹಾಗೂ ಧಾರ್ಮಿಕ ಸೌಹಾರ್ದತೆಯ ಹಾದಿಯಲ್ಲಿ ಯಾವೆಲ್ಲ ವಿಷಯಗಳು ಪ್ರಮುಖ ತೊಡಕಾಗಿವೆಯೆಂಬುದರ ಕಡೆಗೂ ಸ್ಪಷ್ಟ ಸಂಕೇತ ನೀಡಿದ್ದಾರೆ. ಹಾಗೆಯೇ ಸೌಹಾರ್ದ ಮತ್ತು ಭಾವೈಕ್ಯತೆಗೆ ಸಹಾಯಕವಾಗುವಂತಹ ಮಹತ್ವಪೂರ್ಣ ಉಪಾಯಗಳನ್ನೂ ತಿಳಿಸಿದ್ದಾರೆ.

ಅಂತೆಯೇ ರಾಷ್ಟ್ರೀಯ ಭಾವೈಕ್ಯ ಮತ್ತು ಸೌಹಾರ್ದಕ್ಕಾಗಿ 'ಸರ್ವಧರ್ಮ ಸಮಭಾವ'ದ ಹೆಸರಲ್ಲಿ ಒಂದು ನಿರ್ದಿಷ್ಟ ಧರ್ಮವನ್ನು ನಿರ್ದಿಷ್ಟ ಸಂಸ್ಕೃತಿಯನ್ನು ಸಮಸ್ತ ದೇಶವಾಸಿಗಳ ಮೇಲೆ ಹೇರಲು ಹವಣಿಸುತ್ತಿರುವ ಷಡ್ಯಂತ್ರದ ಬಗ್ಗೆಯೂ ಚರ್ಚಿಸಿದ್ದಾರೆ.

ಮೂಲತಃ ಉರ್ದು ಭಾಷೆಯಲ್ಲಿರುವ 'ಕೌಮೀ ಏಕ್ ಜಹ್‌ತೀ ಔರ್ ಇಸ್ಲಾಮ್' ಎಂಬ ಈ ಕೃತಿಯು ಒಂದು ವಿಚಾರಗೋಷ್ಠಿಯಲ್ಲಿ (Seminar) ಮಂಡಿಸಲಾದ ಪ್ರಬಂಧವಾಗಿದೆ. ಇದರ ಅನುವಾದದಲ್ಲಿ ಭಾಷಾ ಶೈಲಿಯನ್ನು ಅತ್ಯಂತ ಸಹಜ ಮತ್ತು ಸರಳವಾಗಿರಿಸಲು ಸಾಧ್ಯಂತ ಶ್ರಮಿಸಲಾಗಿದೆ.

ಅಲ್ಲಾಹ್, ಈ ಕೃತಿಯನ್ನು ಸತ್ಕರ್ಮವಾಗಿ ಸ್ವೀಕರಿಸಲಿ ಮತ್ತು ನಮ್ಮ ದೇಶವನ್ನು ಒಂದು ಸೌಹಾರ್ದಪೂರ್ಣ ಹಾದಿಯಲ್ಲಿ ನಡೆಸಲು ಇದು ಪೂರಕವಾಗಲಿ ಎಂದು ಹಾರೈಸುತ್ತೇವೆ.

ಶಾಂತಿ ಪ್ರಕಾಶನ

# ಲೇಖಕರ ಮಾತು

ನನ್ನ ಈ ಕಿರುಕೃತಿಯಲ್ಲಿ ಮೊತ್ತ ಮೊದಲಿಗೆ, ದೇಶದ ವಿಭಿನ್ನ ಧರ್ಮಗಳ ನಡುವೆ ಯಾವೆಲ್ಲ ವಿಷಯಗಳು ಸಮಾನವಾಗಿವೆ, ಅವುಗಳಲ್ಲಿ ಸಹಮತಿ ಯಾವ ವಿಷಯಗಳಲ್ಲಿ ಇವೆ ಮತ್ತು ಯಾವೆಲ್ಲ ವಿಷಯಗಳಲ್ಲಿ ಅವುಗಳ ನಡುವೆ ಭಿನ್ನಮತವಿದೆಯೆಂಬುದರ ಕುರಿತು ಚರ್ಚಿಸುವೆನು. ಅದರೊಂದಿಗೇ 'ಸರ್ವಧರ್ಮ ಸಮಭಾವ' ಸಿದ್ಧಾಂತದ ಕೆಲವು ದೃಷ್ಟಿಕೋನಗಳ ಸಮೀಕ್ಷೆಯನ್ನು ಪ್ರಸ್ತುತಪಡಿಸುವೆನು.

ತರುವಾಯ, ಧರ್ಮಗಳ ನಡುವೆ ವಾಸ್ತವದಲ್ಲಿ ಸಮಾನವಾಗಿರುವ ವಿಷಯಗಳು ಆ ಧರ್ಮಗಳ ಅನುಯಾಯಿಗಳನ್ನು ಪರಸ್ಪರ ಹೇಗೆ ನಿಕಟಗೊಳಿಸಬಲ್ಲುದು ಎಂಬುದನ್ನೂ ಚರ್ಚಿಸುವೆನು. ಅದರೊಂದಿಗೆ ಅವು ರಾಷ್ಟ್ರೀಯ ಭಾವೈಕ್ಯ ಮತ್ತು ನಮಗೆಲ್ಲ ಪ್ರಿಯವಾಗಿರುವ ಶಾಂತಿಪೂರ್ಣ-ಸೌಹಾರ್ದಮಯ ಜೀವನಕ್ಕೆ ಎಷ್ಟಂಶ ಸಹಕಾರಿಯಾಗಬಲ್ಲುದು ಎಂಬುದನ್ನು ಚರ್ಚಿಸಲಿದ್ದೇನೆ.

ಕೊನೆಯಲ್ಲಿ, ಈ ಸಮಾನಾಂಶಗಳ ಕುರಿತು ಇಸ್ಲಾಮಿನ ನಿಲುವು ಏನು ಮತ್ತು ಆ ಮೌಲ್ಯಯುತ ಉದ್ದೇಶಗಳ ಪ್ರಾಪ್ತಿಗಾಗಿ ಇಸ್ಲಾಮ್ ಏನೆಲ್ಲ ಮಾಡಬಲ್ಲುದು ಎಂಬುದನ್ನು ಸೂಚಿಸುವೆನು.

✍ ಡಾ| ಅಬ್ದುಲ್ ಹಕ್ ಅನ್ಸಾರಿ

## ಅನುಕ್ರಮಣಿಕೆ

# ಧರ್ಮಗಳ ನಡುವಿನ ಸಮಾನಾಂಶಗಳು

ನಾವು ಮುಕ್ತ ಮನಸ್ಸಿನೊಂದಿಗೆ ಧರ್ಮಗಳ ಅಧ್ಯಯನ ನಡೆಸಿದರೆ ಮತ್ತು ವೈಯಕ್ತಿಕ ನಿಲುವುಗಳಿಂದ ದೂರವುಳಿದು, ಕೇವಲ ಅವುಗಳ ನಡುವೆ ಯಾವೆಲ್ಲ ವಿಷಯದಲ್ಲಿ ಸಮಾನತೆಯಿದೆ ಎಂಬುದನ್ನು ಅವಲೋಕಿಸಿದರೆ, ನಮ್ಮೆಲ್ಲ ಧರ್ಮಗಳು ಮಾನವ ಜೀವನದ ಸಾಮಾನ್ಯ ಹಾಗೂ ಮೂಲಭೂತ ಮೌಲ್ಯಗಳಲ್ಲಿ ಒಮ್ಮತ ಹೊಂದಿವೆಯೆಂಬುದು ತಿಳಿದು ಬರುತ್ತದೆ. ಉದಾಹರಣೆಗೆ: ಎಲ್ಲ ಧರ್ಮಗಳೂ ಸತ್ಯ, ನ್ಯಾಯ, ವಚನಪಾಲನೆ ಮತ್ತು ಪ್ರಾಮಾಣಿಕತೆಯನ್ನು ಒಳಿತೆಂದು ಭಾವಿಸುತ್ತವೆ. ಅಂತೆಯೇ ಸುಳ್ಳು, ಅಕ್ರಮ, ವಚನ ಭ್ರಷ್ಟತೆ ಮತ್ತು ಅಪ್ರಾಮಾಣಿಕತೆಯನ್ನು ಕೆಡುಕೆಂದು ಭಾವಿಸುತ್ತವೆ. ಹಿತಚಿಂತನೆ, ದಯೆ, ಔದಾರ್ಯ ಮತ್ತು ಹೃದಯ ವೈಶಾಲ್ಯತೆಯನ್ನು ಮಾನ್ಯ ಮಾಡುತ್ತವೆ. ಸ್ವಾರ್ಥ, ಕ್ರೌರ್ಯ, ಲೋಭ ಮತ್ತು ಸಂಕುಚಿತ ಮನೋಭಾವವನ್ನು ತಿರಸ್ಕಾರದ ದೃಷ್ಟಿಯಿಂದ ನೋಡುತ್ತವೆ. ಸಹನೆ, ಮನೋನಿಗ್ರಹ, ವಿನಯಶೀಲತೆ ಮತ್ತು ಸಭ್ಯತೆಯನ್ನು ಎಲ್ಲ ಧರ್ಮಗಳೂ ಸದ್ಗುಣವೆಂದು ಭಾವಿಸಿದರೆ ಅಸಹನೆ, ಅಲ್ಪತನ, ತಿಕ್ಕಲುತನ, ಕಠೋರತೆ ಮತ್ತು ದುರ್ನಡತೆಯನ್ನು ಕೆಡುಕೆಂದು ಭಾವಿಸುತ್ತವೆ. ಕರ್ತವ್ಯ ಪ್ರಜ್ಞೆ, ಜಾಗರೂಕತೆ, ಪರಿಶ್ರಮ ಮತ್ತು ಉತ್ತರದಾಯಿತ್ವವು ಎಲ್ಲ ಧರ್ಮಗಳಿಗೂ ಇಷ್ಟವಾದವುಗಳಾದರೆ ವಂಚನೆ, ಮೈಗಳ್ಳತನ, ಆಲಸ್ಯ ಮತ್ತು ಹೊಣೆಗೇಡಿತನ ಎಲ್ಲವೂ ಅನಿಷ್ಟಕಾರಿಗಳಾಗಿವೆ.

ಅದೇ ರೀತಿ ಸಕಲ ಧರ್ಮಗಳೂ ಸಾಮಾಜಿಕ ಜೀವನದ ನಿರ್ಮಾಣಕ್ಕಾಗಿ ವ್ಯವಸ್ಥೆ, ಶಿಸ್ತುಬದ್ಧತೆ, ಪರಸ್ಪರ ಸಹಾಯ-ಸಹಕಾರ, ಪ್ರೀತಿ, ಹಿತಚಿಂತನೆ ಮತ್ತು ಸಾಮೂಹಿಕ ನ್ಯಾಯ ಇತ್ಯಾದಿ ಅಗತ್ಯ ಎಂದು ಭಾವಿಸುತ್ತವೆ. ಹಾಗೆಯೇ ಭಿನ್ನತೆ, ವಿಚ್ಛಿದ್ರತೆ, ಅವ್ಯವಸ್ಥೆ, ಪರಸ್ಪರ ಕೇಡು ಬಗೆಯುವುದು, ಅಕ್ರಮ, ಅನ್ಯಾಯ ಮತ್ತು ಕ್ಷೋಭೆಯನ್ನು ವಿನಾಶಕಾರಿ ಗಳೆಂದು ಭಾವಿಸುತ್ತವೆ. ಕಳ್ಳತನ, ವ್ಯಭಿಚಾರ, ಕೊಲೆ, ಸುಲಿಗೆ, ಮೋಸ, ಲಂಚ ಮತ್ತು ಅಪ್ರಾಮಾಣಿಕತೆ ಎಲ್ಲವೂ ಧರ್ಮಗಳ ದೃಷ್ಟಿಯಲ್ಲಿ ಅಪರಾಧ ಕೃತ್ಯಗಳಾಗಿವೆ. ಬಯ್ಗುಳ, ಕೀಟಲೆ, ಪರನಿಂದೆ, ಅಸೂಯೆ, ಸುಳ್ಳಾರೋಪ ಮತ್ತು ಪಿತೂರಿ ಇತ್ಯಾದಿಗಳೆಲ್ಲವೂ ಸಕಲ ಧರ್ಮಗಳ ದೃಷ್ಟಿಯಲ್ಲಿ ಘೋರಪಾಪಗಳಾಗಿವೆ. ಹೆತ್ತವರೊಡನೆ ಸದ್ವರ್ತನೆ, ಸಂಬಂಧಿಕರಿಗೆ ಸಹಾಯ, ನೆರೆಕರೆಯವರೊಡನೆ ಔದಾರ್ಯ, ಮಿತ್ರರೊಡನೆ ಪ್ರೀತಿನಿಷ್ಠೆ, ದುರ್ಬಲರಿಗೆ ಸಹಾಯ, ಅನಾಥರ ಪೋಷಣೆ, ರೋಗಿಗಳ ಸೇವೆ, ಸಂಕಷ್ಟ ಪೀಡಿತರಿಗೆ ಆಶ್ರಯ ಇತ್ಯಾದಿಗಳೆಲ್ಲವೂ ಸಕಲ ಧರ್ಮಗಳ ದೃಷ್ಟಿಯಲ್ಲಿ ಸತ್ಕರ್ಮಗಳಾಗಿವೆ.

ಜನರು ಸತ್ಯವಂತರೂ ಪರಿಶುದ್ಧರೂ ವಿನಮ್ರರೂ ಪರಹಿತಚಿಂತಕರೂ ಆಗಿರಬೇಕು. ಅವರ ಅಂತರಂಗಬಹಿರಂಗಗಳು ಒಂದೇ ರೀತಿಯಿರಬೇಕು. ಇದ್ದುದರಲ್ಲಿ ಸಂತೃಪ್ತರೂ ಇತರರಿಗೆ ನೀಡುವಲ್ಲಿ ವಿಶಾಲ ಹಸ್ತರೂ ಆಗಿರಬೇಕು. ಸ್ವಯಂ ಶಾಂತಿ ಯಿಂದಿರಬೇಕು ಮತ್ತು ಇತರರನ್ನೂ ಶಾಂತಿಯಿಂದಿರಗೊಡಬೇಕು. ಅವರ ಚಿತ್ತವು ಎಲ್ಲರಿಗೂ ಒಳಿತನ್ನು ಬಯಸುತ್ತಿರಬೇಕು. ಯಾರಿಗೂ ಕಿಂಚಿತ್ತೂ ಕೇಡು ಬಗೆಯುವ ಆಲೋಚನೆಯನ್ನೇ ಮಾಡಬಾರದು. ಇವು ಯಾವುದೇ ಭೇದವಿಲ್ಲದೆ ಪ್ರತಿಯೊಂದು ಧರ್ಮವೂ ಬಯಸುವ ಗುಣಗಳಾಗಿವೆ.

ಮಾನವ ಜೀವನ ಮತ್ತು ಸಮಾಜದ ಈ ಸಾಮಾನ್ಯ ಮೌಲ್ಯಗಳು ಯಾವುದೇ ನಿರ್ದಿಷ್ಟ ಧರ್ಮಕ್ಕೆ ಸೀಮಿತವಾಗಿರುವುದಲ್ಲ. ಬದಲಾಗಿ ಅವು ಪ್ರತಿಯೊಂದು ಧರ್ಮದ ಸಮಾನವಾದ ಸೊತ್ತಾಗಿದೆ. ಪ್ರತಿಯೊಂದು ಧರ್ಮವೂ ಅವುಗಳಿಗೆ ಸಂಬಂಧಿಸಿದಂತೆ ಒಂದು ವಿಶಾಲವಾದ ಸಾರ್ವಲೌಕಿಕ ದೃಷ್ಟಿಕೋನವನ್ನು ಹೊಂದಿದೆ. ಯಾವ ಧರ್ಮವೂ ಅವುಗಳಿಗೆ ಸಂಬಂಧಿಸಿದಂತೆ, ತನ್ನವರುಪರರು ಎಂಬ ಭೇದವನ್ನು ಹೊಂದಿರುವುದಿಲ್ಲ. ನ್ಯಾಯ, ಹಿತಚಿಂತನೆ, ಸಹಾನುಭೂತಿ ಮತ್ತು ಪ್ರೀತಿಯನ್ನು ತನ್ನ ಸ್ವಧರ್ಮೀಯರೊಂದಿಗೆ ಮಾತ್ರ ಇರಿಸಬೇಕು ಹಾಗೂ ಅನ್ಯ ಧರ್ಮೀಯರೊಡನೆ ಅಕ್ರಮ, ಪೀಡನೆ, ನಿಂದನೆ, ನಿರ್ದಯೆ ಮತ್ತು ದ್ವೇಷಪೂರ್ಣವಾಗಿ ವ್ಯವಹರಿಸಬೇಕು ಎಂದು ಯಾವ ಧರ್ಮವೂ ಕಲಿಸುವುದಿಲ್ಲ. ತನ್ನವರ ಮಾನಪ್ರಾಣ ಸ್ವೊತ್ತುಗಳನ್ನು ಸಂರಕ್ಷಿಸಬೇಕು ಮತ್ತು ಅನ್ಯರ ಸಂಪತ್ತನ್ನು ಕೊಳ್ಳೆ ಹೊಡೆಯಬೇಕು, ಅವರ ಆಸ್ತಿಪಾಸ್ತಿಗಳನ್ನು ನಾಶಪಡಿಸಬೇಕು, ಅವರ ಮನೆಗಳಿಗೆ ಕೊಳ್ಳಿಯಿಡಬೇಕು, ಅವರ ಯುವಕರನ್ನು ಮತ್ತು ಮಕ್ಕಳನ್ನು ಕೊಲ್ಲಬೇಕು ಹಾಗೂ ಅವರ ಹೆಣ್ಣು ಮಕ್ಕಳ ಮಾನ ಕೆಡಿಸಬೇಕು ಎಂದು ಯಾವ ಧರ್ಮ ಬೋಧಿಸುತ್ತದೆ.

ತನ್ನವರು ಮತ್ತು ಪರರು ಎಂಬರ್ಥದಲ್ಲಿ ಧರ್ಮಗಳು ಒಂದು ವೇಳೆ ಭಿನ್ನತೆಯನ್ನು ಇರಿಸಿದ್ದರೆ, ಅದು ಕೇವಲ ಇತರ ಧರ್ಮೀಯರೊಡನೆ ತೋರುವುದಕ್ಕಿಂತ ತುಸು ಹೆಚ್ಚು ಸ್ವಧರ್ಮೀಯರೊಡನೆ ಸದ್ವರ್ತನೆ, ಪ್ರೀತಿ, ತ್ಯಾಗಬಲಿದಾನಗಳನ್ನು ತೋರಬೇಕು ಎಂಬುದಾಗಿದೆ. ಅಷ್ಟೇ ಹೊರತು ಸ್ವಧರ್ಮೀಯರೊಂದಿಗಿನ ಸದ್ವರ್ತನೆಗಾಗಿ ಅನ್ಯಧರ್ಮೀಯರ ಹಕ್ಕು ಕಸಿಯುವುದು, ತಮ್ಮವರ ಸಂತೋಷಕ್ಕಾಗಿ ಅನ್ಯರ ಸಂಪತ್ತು ಕೊಳ್ಳೆ ಹೊಡೆಯುವುದು, ತಮ್ಮವರ ಬಲವರ್ಧನೆ ಮತ್ತು ಏಳಿಗೆಗಾಗಿ ಅನ್ಯರ ಬಲಮುರಿಯುವುದು ಮತ್ತು ಅವಮಾನಿಸುವುದು ಎಂಬಿತ್ಯಾದಿ ಧೋರಣೆಯನ್ನು ಯಾವ ಧರ್ಮವೂ ಹೊಂದಿಲ್ಲ.

ಈ ಸಾಮಾನ್ಯ ಮಾನವೀಯ ಮೌಲ್ಯಗಳಲ್ಲಿ ಯಾವುದೆಲ್ಲ ಒಳಿತುಗಳಿವೆಯೋ ಅವೆಲ್ಲ ಮಾನವನ ಘನತೆ ಮತ್ತು ಸಭ್ಯತೆಗಳ ಮಾನದಂಡವಾಗಿವೆ ಹಾಗೂ ಯಾವುದೆಲ್ಲ ಕೆಡುಕುಗಳಿವೆಯೋ ಅವು ಮಾನವನ ಅವಮಾನ, ಅಧಃಪತನದ ಮಾನದಂಡವಾಗಿವೆ ಎಂಬುದು ಪ್ರತಿಯೊಂದು ಧರ್ಮದ ವಿಶ್ವಾಸವಾಗಿದೆ. ಅಂತೆಯೇ ಮಾನವನು ಒಳಿತು ಗಳನ್ನೆಸಗುವ ಮೂಲಕ ಉನ್ನತನಾಗುತ್ತಾನೆ ಮತ್ತು ಕೆಡುಕುಗಳನ್ನೆಸಗುವ ಮೂಲಕ ಅವಮಾನಿತನೂ ನಿಂದ್ಯನೂ ಆಗುತ್ತಾನೆ ಎಂಬುದು ಎಲ್ಲ ಧರ್ಮಗಳ ಶಿಕ್ಷಣವಾಗಿದೆ.

ಅದೇ ಪ್ರಕಾರ, ಮಾನವನಿಗೆ ಒಳಿತುಗಳನ್ನೆಸಗದೆ ಮತ್ತು ಕೆಡುಕಿನಿಂದ ದೂರವುಳಿಯದೆ ಎಂದಿಗೂ ಮುಕ್ತಿ ದೊರೆಯಲಾರದು ಎಂಬುದೂ ಎಲ್ಲ ಧರ್ಮಗಳ ನಂಬಿಕೆಯಾಗಿದೆ. ಇನ್ನು ಮುಕ್ತಿ ಮತ್ತು ಮೋಕ್ಷ ಪಡೆಯಲಿಕ್ಕಿರುವ ಶರತ್ತು ಮತ್ತು ಬೇಡಿಕೆಗಳೇನು? ಈ ವಿಷಯದಲ್ಲಿ ಮಾತ್ರ ಧರ್ಮಗಳ ನಡುವೆ ಭಿನ್ನಾಭಿಪ್ರಾಯವಿದೆ. ಆದರೆ ಅದೇ ವೇಳೆ, ಈ ಮೇಲೆ ತಿಳಿಸಲಾಗಿರುವ ಎಲ್ಲ ಕೆಡುಕುಗಳಿಂದ ದೂರವುಳಿಯುವುದು ಮತ್ತು ಒಳಿತುಗಳಲ್ಲಿ ಮುಂದುವರಿಯುವುದೇ ಮುಕ್ತಿಯನ್ನು ಹೊಂದಲಿಕ್ಕಿರುವ ಏಕೈಕ ಮಾರ್ಗ ಎಂಬುದರ ಕುರಿತು ಎಲ್ಲ ಧರ್ಮಗಳೂ ಸಹಮತ ಹೊಂದಿವೆ.

ತರುವಾಯ, ಈ ಒಳಿತುಗಳನ್ನು ನಿಷ್ಕಳಂಕತೆ ಮತ್ತು ಸತ್ಸಂಕಲ್ಪದೊಂದಿಗೆ ಎಸಗಬೇಕು ಹಾಗೂ ಕೆಡುಕುಗಳಿಂದ ಸನ್ಮನಸ್ಸಿನೊಂದಿಗೆ ದೂರವುಳಿಯಬೇಕು; ತೋರಿಕೆಯ ಭಾವನೆ, ಲಾಭದ ಲಾಲಸೆ ಅಥವಾ ನಷ್ಟದ ಆತಂಕ ಯಾವುದೂ ನಮ್ಮ ಒಳಿತುಗಳಿಗೆ ಪ್ರೇರಕವಾಗಬಾರದು; ನಾವು ಒಳಿತುಗಳನ್ನೆಸಗುವುದಿದ್ದರೆ ಒಳಿತಿಗಾಗಿಯೇ ಇರಬೇಕು ಅಥವಾ ದೇವ ಸಂಪ್ರೀತಿ ಮತ್ತು ಸಾಮಿಪ್ಯಕ್ಕಾಗಿರಬೇಕು; ಅಂತೆಯೇ ಕೆಡುಕಿನಿಂದ ದೂರವುಳಿದಿದ್ದರೆ, ಅದು ಯಾವುದೇ ಒತ್ತಡ ಅಥವಾ ಬಲವಂತದಿಂದಾಗಿಯಲ್ಲ, ಬದಲಾಗಿ ಅವು ಕೇವಲ ಕೆಡುಕೆಂಬ ಕಾರಣಕ್ಕಾಗಿ ಅಥವಾ ದೇವಕ್ರೋಧಕ್ಕೆ ಹೆದರಿ ದೂರವುಳಿಯಬೇಕು ಎಂಬುದೇ ಪ್ರತಿಯೊಂದು ಧರ್ಮದ ಬೋಧನೆಯಾಗಿದೆ.

ಜನರ ಆತ್ಮವಿಶ್ವಾಸ ಮತ್ತು ಸಮಾಜ ನಿರ್ಮಾಣಕ್ಕೆ ಸಂಬಂಧಿಸಿ ಧರ್ಮಗಳ ದೃಷ್ಟಿಕೋನದಲ್ಲಿ ಭಿನ್ನತೆಯಿದೆ. ಆದರೆ ವ್ಯಕ್ತಿಯ ಆತ್ಮವಿಕಾಸದ ಯಾವುದೇ ಕಾರ್ಯಕ್ರಮ ಮತ್ತು ಸಮಾಜ ಸುಧಾರಣೆಯ ಯಾವುದೇ ಯೋಜನೆಯು ಈ ಮೇಲೆ ತಿಳಿಸಲಾಗಿರುವ ಸಾಮಾನ್ಯ ಮಾನವೀಯ ಮೌಲ್ಯಗಳನ್ನು ಆರ್ಜಿಸದೆ ಯಶಸ್ವಿಯಾಗಲಾರದು ಎಂಬ ವಿಷಯದಲ್ಲಿ ಯಾವ ಧರ್ಮದಲ್ಲೂ ಭಿನ್ನಾಭಿಪ್ರಾಯವಿಲ್ಲ.

ಜಪ-ತಪ ಮತ್ತು ಉಪಾಸನೆ-ಭಕ್ತಿಯಿಂದಾಗುವ ಉಪಯೋಗವೇನು? ಈ ವಿಷಯದಲ್ಲಿಯೂ ಧರ್ಮಗಳ ನಡುವೆ ಭಿನ್ನತೆಯಿದೆ. ಆದರೆ ಆ ಕರ್ಮಗಳ ಉದ್ದೇಶ ಏನೇ ಇದ್ದರೂ ಮಾನವನ ಮನ ಮಸ್ತಿಷ್ಕಗಳು, ಸಾಮರ್ಥ್ಯ ಮತ್ತು ಆಲೋಚನೆಯಲ್ಲಿ ನಿರಂತರ ತರಬೇತಿಯಾಗುತ್ತಿರಬೇಕು. ಅಂತೆಯೇ ಆ ಮೂಲಕ ಮಾನವತೆಯ ಸಾಮಾನ್ಯ ಒಳಿತುಗಳು ಆತನಿಗೆ ಪ್ರಿಯವಾಗಬೇಕು ಮತ್ತು ಆತನಿಂದ ಸರಾಗವಾಗಿ ಒಳಿತುಗಳೇ ಆಗುತ್ತಿರಬೇಕು; ಮಾನವತೆಯ ಸಾಮಾನ್ಯ ಕೆಡುಕುಗಳ ವಿರುದ್ಧ ಆತನಲ್ಲಿ ತೀರಾ ದ್ವೇಷ ಭಾವನೆ ಉಂಟಾಗಿ, ಆತ ಅವುಗಳಿಂದ ದೂರ ಉಳಿಯಬೇಕು ಎಂಬಿತ್ಯಾದಿಗಳ ಕುರಿತು ಧರ್ಮಗಳ ಮಧ್ಯೆ ಯಾವುದೇ ಮತಭೇದವಿಲ್ಲ. ಒಳಿತುಗಳನ್ನೆಸಗುವ ಮೂಲಕ ವ್ಯಕ್ತಿಯು ಆನಂದವನ್ನು ಅನುಭವಿಸುತ್ತಾನೆ. ಒಂದು ವೇಳೆ ಅವನಿಂದ ಪ್ರಮಾದವಶಾತ್ ಏನಾದರೂ ಕೆಡುಕು ಸಂಭವಿಸಿಬಿಟ್ಟಲ್ಲಿ, ಆತ ಅದಕ್ಕಾಗಿ ಬಹಳ ಪಶ್ಚಾತ್ತಾಪಪಟ್ಟುಕೊಳ್ಳುತ್ತಾನೆ ಮತ್ತು ಲಜ್ಜಿತನಾಗುತ್ತಾನೆ. ಇದು ಎಲ್ಲ ಧರ್ಮಗಳಲ್ಲಿ ಕಾಣುವ ಸಾಮಾನ್ಯ ಮಾನವೀಯ ಕಲ್ಪನೆಗಳು.

ಪೂಜೆ-ಉಪಾಸನೆ, ಧ್ಯಾನ, ತಪಸ್ಸು ಮತ್ತು ಸಾಧನೆಗಳ ಮುಂದೆ ಸಹಾನುಭೂತಿ, ಪ್ರೀತಿ, ಔದಾರ್ಯ ಮತ್ತು ತ್ಯಾಗಪೂರ್ಣ ವ್ಯವಹಾರಕ್ಕೆ ಯಾವ ಸ್ಥಾನವಿದೆ ಎಂಬುದರ ಕುರಿತೂ ಧರ್ಮಗಳ ನಡುವೆ ಕೊಂಚ ಮಟ್ಟಿನ ಭಿನ್ನತೆಯಿದೆ. ಆದರೆ ಆ ನೈತಿಕ ಗುಣಗಳಲ್ಲಿ ಕೊರತೆಯುಂಟಾದರೆ ಅವುಗಳಿಗೆ ಬೇರೆ ಯಾವುದೇ ಪರ್ಯಾಯವಿಲ್ಲ ಎಂಬ ಕುರಿತು ಯಾವ ಧರ್ಮದಲ್ಲೂ ಭಿನ್ನಾಭಿಪ್ರಾಯವಿಲ್ಲ. ಪೂಜೆ-ಉಪಾಸನೆ ಮತ್ತು ನಮಾಝ್-ಉಪವಾಸ ವ್ರತಗಳ ಹೆಚ್ಚಳ, ತೀರ್ಥಯಾತ್ರೆ ಮತ್ತು ಝಿಯಾರತ್‌ಗಳು, ಗಂಗಾಸ್ನಾನ ಮತ್ತು ಹಜ್ಜ್ ಕರ್ಮಗಳಿಂದ ಆ ನೈತಿಕ ಗುಣಗಳ ಕೊರತೆಯನ್ನು ನೀಗಿಸಲಾಗದು. ಅಂತೆಯೇ ಕೆಡುಕುಗಳ ದುಷ್ಪರಿಣಾಮವನ್ನು ಕಡಿಮೆಗೊಳಿಸಲಾಗದು.

---

# ಭಿನ್ನತೆ ಮತ್ತು ವಿಧಗಳು

**ಮೇ**ಲೆ ಪ್ರಸ್ತಾಪಿಸಲಾಗಿರುವ ಎಲ್ಲ ಸಾಮಾನ್ಯ ಮಾನವೀಯ ಮತ್ತು ನೈತಿಕ ಮೌಲ್ಯಗಳ ಕುರಿತು ಧರ್ಮಗಳ ನಡುವೆ ಏಕಾಭಿಪ್ರಾಯವಿದೆ. ಅದಕ್ಕೆ ಹೊರತಾಗಿ ಸಹಮತವಿರುವಂತಹ ಕೆಲವು ವಿಷಯಗಳಿವೆ. ಅವುಗಳ ಪೈಕಿ ಹೆಚ್ಚಿನವು ಔಪಚಾರಿಕ (Formal) ಮತ್ತು ನಕಾರಾತ್ಮಕವಾದವುಗಳಾದರೆ, ವಾಸ್ತವಿಕ ಮತ್ತು ಸಕಾರಾತ್ಮಕ ವಾಗಿರುವವುಗಳು ಬಹಳ ಕಡಿಮೆ. ಇದನ್ನು ಸವಿಸ್ತಾರವಾಗಿ ವಿವರಿಸುತ್ತೇನೆ.

ಎಲ್ಲ ಧರ್ಮಗಳಲ್ಲೂ ಒಂದು ಸಮಾನವಾದ ಭಾವನೆಯಿದೆ. ಅದೇಂದರೆ ಈ ಪ್ರಕೃತಿಯ ಕಾರ್ಖಾನೆ ಮತ್ತು ಮಾನವನ ಅಸ್ತಿತ್ವವು ಕೇವಲ ಭೌತಿಕ ವಿದ್ಯೆಗೆ ಸಂಬಂಧಿಸಿರುವುದಲ್ಲ. ಭೌತಿಕತೆಯ (ವಿಜ್ಞಾನದ) ಪರಿಧಿಯನ್ನೂ ಮೀರಿದ ವಾಸ್ತವಿಕತೆಯೊಂದಿದೆ. ಈ ಜೀವ ಸಂಕುಲವು ಸ್ವಯಂ ಉದ್ಭವಿಸಿದುದಲ್ಲ. ಅದರ ಹೊರತು ಇನ್ನೊಂದು ವಾಸ್ತವಿಕತೆಯಿದೆ. ಈ ತಥ್ಯವನ್ನು ಪ್ರತಿಯೊಂದು ಧರ್ಮವೂ ಅರಿತಿದೆ. ಆದರೆ ಅದರೊಂದಿಗೆ, ಈ ಅಭೌತಿಕವಾದ ವಾಸ್ತವಿಕತೆಯೇನು, ಅದು ಒಂದಿರುವುದೇ ಅಥವಾ ಹಲವು ಇವೆಯೇ, ಅದು ಯಾವೆಲ್ಲ ಗುಣವಿಶೇಷತೆಗಳನ್ನು ಹೊಂದಿದೆ, ವರ್ತಮಾನ ಜಗತ್ತು ಮತ್ತು ಮಾನವ ನೊಂದಿಗೆ ಅದರ ಸಂಬಂಧವೇನು ಎಂಬಿತ್ಯಾದಿ ಪ್ರಶ್ನೆಗಳೂ ಏಳುತ್ತವೆ. ಈ ಮೂಲಭೂತ ಸಮಸ್ಯೆಗೆ ಸಂಬಂಧಿಸಿ ಪ್ರತಿಯೊಂದು ಧರ್ಮದ ನಿಲುವು ಭಿನ್ನವಾಗಿರುತ್ತದೆ.

ಇಸ್ಲಾಮಿನ ದೃಷ್ಟಿಯಲ್ಲಿ ಆ ಸಾರ್ವಲೌಕಿಕ ಸತ್ಯವು ಪ್ರಜ್ಞೆ, ಜ್ಞಾನ, ಶಕ್ತಿ, ಅಧಿಕಾರ ಮತ್ತು ನಿರ್ಧಾರದ ಒಡೆಯನಾದ ಅಲ್ಲಾಹನಾಗಿದ್ದಾನೆ. ಅವನು ಏಕೈಕನೂ ಅದ್ವಿತೀಯನೂ ಸಕಲ ವಿಶ್ವವನ್ನು ಸೃಷ್ಟಿಸಿದವನೂ ಆಗಿದ್ದಾನೆ. ಅವನೇ ವಿಶ್ವದ ಪಾಲಕ, ಪ್ರಭು, ಸಾಮ್ರಾಟನಾಗಿದ್ದಾನೆ. ಮಾನವನು ವಾಸ್ತವದಲ್ಲಿ ಆತ್ಮ ಮತ್ತು ದೇಹದ ಒಂದು ವಿಶಿಷ್ಟ ಸಂಯೋಜನೆಯಾಗಿದ್ದಾನೆ. ತನ್ನ ಸೃಷ್ಟಿಕರ್ತನಂತೆಯೇ ಮಾನವನಿಗೆ ಸೀಮಿತ ರೂಪದಲ್ಲಿ ಜ್ಞಾನ, ಪ್ರಜ್ಞೆ, ಅಧಿಕಾರ ಮತ್ತು ಸಂಕಲ್ಪ ಶಕ್ತಿಯಿದೆ. ಆದರೆ ಈ ಗುಣ ಸ್ವಭಾವದಲ್ಲಿ ಏಕರೂಪತೆಯಿದ್ದಾಗಿಯೂ ಮಾನವನು ದೇವನ ಸೃಷ್ಟಿ ಮತ್ತು ದಾಸನಾಗಿರುತ್ತಾನೆಯೇ ಹೊರತು ದೇವತ್ವದಲ್ಲಿ ಭಾಗೀದಾರನಾಗಲಾರ. ಮಾನವನು ತನ್ನ ಅಸ್ತಿತ್ವ, ಅಧಿಕಾರ ಮತ್ತು ಕರ್ಮದಲ್ಲಿ ಅಲ್ಲಾಹನಿಗೆ ಅವಲಂಬಿತನೂ ಅವನ ಆದೇಶಕ್ಕೆ ಬದ್ಧನೂ ಆಗಿದ್ದಾನೆ. ವಸ್ತುತಃ

ತನ್ನ ಸೃಷ್ಟಿಕರ್ತ ಪಾಲಕ ಪ್ರಭುವಿನ ಅನುಸರಣೆ ಮತ್ತು ಪ್ರೀತಿಯೇ ಮಾನವನ ಪಾಲಿಗೆ ಅತ್ಯುನ್ನತ ಅನುಗ್ರಹ ಆಗಿದೆ. ದೇವಾಸ್ತಿತ್ವಕ್ಕೆ ಸಂಬಂಧಿಸಿದಂತೆ ಇಸ್ಲಾಮಿನ ಈ ಕಲ್ಪನೆಯು ನಿಷ್ಕಳಂಕ ಏಕದೇವ ವಿಶ್ವಾಸವಾಗಿದೆ.

ಯಹೂದಿಯರೂ ಏಕದೇವ ವಿಶ್ವಾಸಿಗಳಾಗಿದ್ದಾರೆ. ಪ್ರಾರಂಭದಲ್ಲಿ ಕ್ರೈಸ್ತರೂ ಇದೇ ವಿಶ್ವಾಸವನ್ನು ಹೊಂದಿದ್ದರು. ಆರಂಭ ಕಾಲದಲ್ಲಿ ಪ್ರವಾದಿ ಈಸಾ ಮಸೀಹರ(ಅ) ಸ್ಥಾನಮಾನವು ದೇವನ ಓರ್ವ ಆಜ್ಞಾಪಾಲಕ ದಾಸ ಮತ್ತು ಪ್ರತಿಷ್ಠಿತ ಪ್ರವಾದಿಯೆಂದಾಗಿತ್ತು. ಆದರೆ ಕಾಲ ಕ್ರಮೇಣ ಆ ಏಕದೇವ ವಿಶ್ವಾಸದಲ್ಲಿ ತ್ರಿಏಕತ್ವ (Trinity) ನುಸುಳಿಕೊಂಡಿತು.

ಝುರತುಷ್ಟರೂ ಮೂಲತಃ ಏಕದೇವ ವಿಶ್ವಾಸಿಗಳಾಗಿದ್ದರು. ಆದರೆ ಅವರ ಧರ್ಮದಲ್ಲೂ ಕ್ರಮೇಣ ಬದಲಾವಣೆಯುಂಟಾಗತೊಡಗಿತು. ಈಗ ಝುರತುಷ್ಟರು ಒಳಿತು-ಕೆಡುಕು, ಪ್ರಕಾಶ-ಅಂಧಕಾರಗಳೆಂಬ ಎರಡು ಸ್ಥಾಯಿ ಮತ್ತು ಸಮಾನಾಂತರ ಶಕ್ತಿಗಳ ಮೇಲೆ ವಿಶ್ವಾಸವಿರಿಸುತ್ತಾರೆ. ಹಾಗೆಯೇ ವಿಶ್ವ ಮತ್ತು ಮಾನವೇತಿಹಾಸವನ್ನು ಈ ಎರಡೂ ಶಕ್ತಿಗಳ ಪರಸ್ಪರ ಸಂಘರ್ಷದ ಫಲಿತಾಂಶವೆಂದು ಭಾವಿಸುತ್ತಾರೆ.

ಜೈನ ಧರ್ಮದ ನಂಬಿಕೆಯ ಪ್ರಕಾರ, ಆತ್ಮವು ಶಾಶ್ವತ, ಅನಾದಿ ಮತ್ತು ಅನಂತವಾದ ವಾಸ್ತವಿಕತೆಯಾಗಿದೆ. ಅದು ಯಾವುದೋ ಒಂದು ರೀತಿಯಿಂದ 'ಅನಾತ್ಮ'ದೊಂದಿಗೆ ವಿಲೀನವಾಗಿ ಜೀವನದ ಜಂಜಡದಲ್ಲಿ ಬಂದಿಯಾಗಿ ಬಿಟ್ಟಿದೆ. ಈ ವಿಶ್ವ ಮತ್ತು ಇದರಲ್ಲಿರುವ ಸಕಲ ವಸ್ತುಗಳು ಎಷ್ಟೇ ನಿಶ್ಚಲ ಮತ್ತು ಅಪ್ರಜ್ಞಾವಸ್ಥೆಯಲ್ಲಿರಲಿ, ಅವು ಆತ್ಮದ ವಿಭಿನ್ನ ಉತ್ಥಾನ-ಪತನಕ್ಕೆ ಸಂಬಂಧಿಸಿದ ಸ್ಥಿತಿಯ ಹೆಸರಾಗಿದೆ. ಈ ಆಧ್ಯಾತ್ಮಿಕ ವಾಸ್ತವಿಕತೆಯು ಒಂದಲ್ಲ, ಬದಲಾಗಿ ಅಸಂಖ್ಯಾತ ಆತ್ಮಗಳಿವೆ. ಆ ಅಸಂಖ್ಯಾತ ಆತ್ಮಗಳಿಗಿಂತ ಉನ್ನತವಾದ ಮತ್ತು ದೇವನೆನ್ನುವಂತಹ ಬೇರೆ ಯಾವ ವಸ್ತುವೂ ಇಲ್ಲ... ಇತ್ಯಾದಿ. ಸಾಮಾನ್ಯವಾಗಿ ಯಾವ ಗುಣ ಮತ್ತು ಶಕ್ತಿಗಳನ್ನು ದೇವನಿಗೆ ಜೋಡಿಸಿ ಹೇಳಲಾಗುತ್ತದೋ ಅವೆಲ್ಲವನ್ನೂ ಜೈನ ಧರ್ಮವು 'ಅನಾತ್ಮ'ಗಳ ಮಾಲಿನ್ಯದಿಂದ ಸಂಪೂರ್ಣ ಮುಕ್ತವಾಗಿರುವ ಆತ್ಮಗಳೊಡನೆ ಸೇರಿಸುತ್ತದೆ.

ಬೌದ್ಧ ಧರ್ಮದಲ್ಲಿ ವಿಭಿನ್ನ ಪಂಗಡಗಳಿವೆ. ಸತ್ಯದ ಬಗೆಗಿನ ಅವೆಲ್ಲವುಗಳ ವಿಶ್ವಾಸವು ಪರಸ್ಪರ ಭಿನ್ನವಾಗಿದೆ. ಬೌದ್ಧ ಧರ್ಮದ ಅತಿದೊಡ್ಡ ವಿಭಾಗದ ನಂಬಿಕೆಯ ಪ್ರಕಾರ, ಯಾವುದೇ ವಸ್ತು ಅನಶ್ವರ ಎಂಬುದಿಲ್ಲ. ಮಾನವನ ಪ್ರಜ್ಞೆಯು, ಒಂದರ ಹಿಂದೆ ಒಂದರಂತೆ ನಿರಂತರ ಬರುವ ಕ್ಷಣಿಕ ಪ್ರಜ್ಞೆಗಳ ಸಮಾಹಾರವಾಗಿದೆ. ಇದಕ್ಕಿಂತ ಭಿನ್ನವಾದ ಸತ್ಯ ಬೇರೊಂದಿಲ್ಲ. ಈ ನಿರಂತರತೆಯ ಕೊನೆಯ ಹಂತವನ್ನು ನಿರ್ವಾಣವೆನ್ನಲಾಗುತ್ತದೆ. ಕೆಲವು ಪಂಗಡಗಳ ಪ್ರಕಾರ, ನಿರ್ವಾಣವು ನೇತ್ಯಾತ್ಮಕ ಅವಸ್ಥೆಯಾಗಿರುವುದಲ್ಲ; ಬದಲಾಗಿ ಅದು ಕಲ್ಪನೆಗೂ ವಿವರಣೆಗೂ ,ಅತೀತವಾದ ದೃಢ ವಾಸ್ತವವಾಗಿದೆ.

ಹಿಂದೂ ಧರ್ಮದಲ್ಲಿ ಯಾವುದೇ ನಿರ್ದಿಷ್ಟ ಚಿಂತನೆಯಿಲ್ಲ. ಅದ್ವೈತ, ದ್ವೈತ ಮತ್ತು ಬಹುದೇವತ್ವ ಎಲ್ಲವೂ ಹಿಂದೂ ಧರ್ಮದ ವಿಶ್ವಾಸದಲ್ಲಿ ಒಳಪಡುತ್ತವೆ. ಅಷ್ಟೇ ಅಲ್ಲ,

ದೇವಾಸ್ತಿತ್ವವನ್ನು ನಿರಾಕರಿಸುವಂತಹ ನಾಸ್ತಿಕವಾದವೂ ಆ ಧರ್ಮದಲ್ಲಿ ಸೇರಿದೆ. ಆದರೆ ಒಟ್ಟಾರೆಯಾಗಿ ಹಿಂದೂ ಧರ್ಮದಲ್ಲಿ ಒಬ್ಬ ಪರಮಾತ್ಮನ ಕಲ್ಪನೆಯಿದೆ. ಹಾಗಿದ್ದೂ ದೇವತ್ವವು ಕೇವಲ ಪರಮಾತ್ಮನಿಗೆ ಸೀಮಿತವಾಗಿರುವುದಿಲ್ಲವೆಂದೂ ಭಾವಿಸಲಾಗುತ್ತದೆ. ಬದಲಾಗಿ, ಭೂಮಿ-ಆಕಾಶಗಳಲ್ಲಿರುವ ಸಕಲ ವಸ್ತುಗಳಲ್ಲಿಯೂ ದೇವತ್ವವನ್ನು ಕಾಣಲಾಗುತ್ತದೆ. ಈ ಕಲ್ಪನೆಗೆ ಹಿಂದೂ ಧರ್ಮದಲ್ಲಿ ಎಷ್ಟು ಮಹತ್ವ ನೀಡಲಾಗಿದೆಯೆಂದರೆ, ಸೃಷ್ಟಿಕರ್ತ ಮತ್ತು ಸೃಷ್ಟಿಗಳ ನಡುವೆ ಯಾವುದೇ ಮೂಲಭೂತ ವ್ಯತ್ಯಾಸ ಉಳಿದು ಬಿಟ್ಟಿಲ್ಲ. ಸೃಷ್ಟಿಕರ್ತ-ಸೃಷ್ಟಿ, ದೇವ-ದಾಸ ಎಂಬ ಶಾಶ್ವತ ಮತ್ತು ಸ್ಥಿರ ವ್ಯತ್ಯಾಸ ಇದೆಯೆಂಬ ಇಸ್ಲಾಮ್ ಹಾಗೂ ಯಹೂದಿ ಧರ್ಮಗಳ ವಿಶ್ವಾಸಕ್ಕೆ ಹಿಂದೂ ಧರ್ಮವು ತೀರಾ ವ್ಯತಿರಿಕ್ತವಾಗಿದೆ. ಕೆಲವು ವಿಭಾಗಗಳ ಪ್ರಕಾರ, ಸತ್ಯವು ಒಂದು ಅತೀಂದ್ರಿಯ ಶಕ್ತಿಯಾಗಿದೆ. ಮಾನವ ವರ್ಗವೂ ಸೇರಿದಂತೆ ವಿಶ್ವದ ಸಕಲ ಚರಾಚರಗಳು ಆ ಅತೀಂದ್ರಿಯ ಶಕ್ತಿಯ ಸೀಮಿತ ಪ್ರದರ್ಶನವಾಗಿದೆ. ಸಾಮಾನ್ಯ ಹಿಂದೂವೊಬ್ಬನು ಯಾವುದನ್ನು ದೇವನೆಂದು ಹೇಳುತ್ತಾನೋ ಆ ಶಕ್ತಿಯೂ ಒಂದು ಅನಿವಾರ್ಯ ಬೇಡಿಕೆಯ ಅವತರಣವಾಗಿದೆಯೆಂದು ಆ ವಿಭಾಗಗಳು ಹೇಳುತ್ತವೆ. ಮಾನವನ ವಿಕಾಸದ ಅತ್ಯುನ್ನತ ಸ್ಥಾನವು ಆ ಅತೀಂದ್ರಿಯ ಶಕ್ತಿಯ ಸಂಪ್ರೀತಿಯನ್ನು ಅವಲಂಬಿಸಿದೆ.

ಧರ್ಮಗಳ ನಡುವೆ ಸತ್ಯ ಹಾಗೂ ಪ್ರಪಂಚ ಮತ್ತು ಮಾನವನ ಕುರಿತಾಗಿರುವ ಈ ಭಿನ್ನತೆಗಳು ಮೂಲಭೂತ ವಾಸ್ತವವಾಗಿದೆ. ಈ ಭಿನ್ನತೆಯ ಪ್ರಭಾವವು ಇಡೀ ವ್ಯವಸ್ಥೆಯ ಮೇಲೆ ಒಟ್ಟಾರೆಯಾಗಿಯೋ ಅಥವಾ ಅದರ ಅಂಗಗಳ ಮೇಲೆ ಹಂತ ಹಂತವಾಗಿಯೋ ಪ್ರಭಾವ ಬೀರುತ್ತಿರುತ್ತದೆ. ಧರ್ಮಗಳ ಉದಾಹರಣೆಯು ಬೇರೆ ಬೇರೆ ತಳಿಯ ಮರಗಳಂತಿದೆ. ಮರಗಳಿಗೆಲ್ಲ ಬೇರು, ಕಾಂಡ, ಗೆಲ್ಲು, ಹೂ, ಹಣ್ಣುಗಳಿರುತ್ತವೆಂಬ ಕಾರಣಕ್ಕೆ ಒಂದೇ ಎಂದು ಅನ್ನಿಸಬಹುದು. ಆದರೆ ವಾಸ್ತವದಲ್ಲಿ, ಈ ಬಾಹ್ಯ ಸಮಾನತೆಯ ಹೊರತಾಗಿಯೂ ಪ್ರತಿಯೊಂದು ಮರವೂ ಇತರ ಮರಗಳಿಗಿಂತ ಭಿನ್ನವಾಗಿರುತ್ತದೆ. ಅದೇ ರೀತಿ, ಬಾಹ್ಯವಾಗಿ ಸಮಾನ ಅಂಶಗಳನ್ನು ಹೊಂದಿದ ಹೊರತಾಗಿಯೂ ಪ್ರತಿಯೊಂದು ಧರ್ಮವೂ ಸತ್ಯದ ಪರಿಕಲ್ಪನೆ ಮತ್ತು ಅದನ್ನು ಹೊಂದುವ ವಿಧಾನ, ಮಾನವ ಜೀವನದ ಗುರಿ ಮತ್ತು ಅದನ್ನು ಗಳಿಸುವ ವಿಧಾನದಲ್ಲಿ ಇತರ ಧರ್ಮಗಳಿಗಿಂತ ಭಿನ್ನವಾಗಿರುತ್ತದೆ.

ಉದಾಹರಣೆಗೆ, ಆರಾಧನೆ-ಉಪಾಸನೆಯ ವಿಧಾನಗಳನ್ನೇ ತೆಗೆದುಕೊಳ್ಳಿ. ಅದರ ಮೂಲಕವೇ ಧರ್ಮಾವಲಂಬಿಗಳು ಆಯಾ ಧರ್ಮಗಳ ನಂಬಿಕೆಯಂತೆ ಪರಮ ಸತ್ಯದೊಂದಿಗೆ ಸಂಪರ್ಕ ಹೊಂದುತ್ತಾರೆ. ಯಾವ ಧರ್ಮದಲ್ಲಿ ಮಾನವಾತೀತ ಅಸ್ತಿತ್ವವು ಪರಮ ಸತ್ಯವಾಗಿದೆಯೆಂದೂ ಮಾನವನೊಂದಿಗೆ ಅದರ ಸಂಬಂಧವು ಅಸೀಮವಾಗಿದೆಯೆಂದೂ ನಂಬಲಾಗುತ್ತದೋ ಆ ಧರ್ಮದಲ್ಲಿ ಧ್ಯಾನಕ್ಕೆ (Meditation) ಮೂಲಭೂತ ಮಹತ್ವವಿದೆ. ತದ್ವಿರುದ್ಧವಾಗಿ ಯಾವ ಧರ್ಮದಲ್ಲಿ ದೇವನ ಕಲ್ಪನೆಯು ಮಾನವೀಯವಾಗಿದ್ದು ಮಾನವನೊಂದಿಗೆ ದೇವನ ಸಂಬಂಧವು ಒಡೆಯ ಮತ್ತು ದಾಸನದ್ದಾಗಿರುವುದೋ ಆ ಧರ್ಮದಲ್ಲಿ ಆರಾಧನೆ, ಜಪ ಮತ್ತು ಪ್ರಾರ್ಥನೆಗಳು ಮಹತ್ವ ಪಡೆದಿರುತ್ತವೆ.

ಅದೇ ರೀತಿ, ಆತ್ಮವು ಅದು ಒಂದು ಭೌತಿಕವಾದ ದೇಹದಲ್ಲಿ ಬಂದಿಯಾಗಿದೆ ಯೆಂದೂ ಆತ್ಮ ಮತ್ತು ದೇಹದ ಪರಸ್ಪರ ಸಂಘರ್ಷವನ್ನೇ ಮೂಲಭೂತ ಸತ್ಯವೆಂದೂ ಭಾವಿಸುವ ಧರ್ಮದಲ್ಲಿ ವೈರಾಗ್ಯ, ಇಂದ್ರಿಯ ನಿಗ್ರಹ ಮತ್ತು ತಪಸ್ಸುಗಳನ್ನು ಆತ್ಮದ ವಿಕಾಸಕ್ಕೆ ಅನಿವಾರ್ಯವೆನ್ನಲಾಗುತ್ತದೆ. ತದ್ವಿರುದ್ಧವಾಗಿ ಆತ್ಮ ಮತ್ತು ದೇಹಗಳ ಪರಸ್ಪರ ಸಹಕಾರಕ್ಕೆ ಪ್ರಾಮುಖ್ಯತೆ ನೀಡಿರುವ ಮತ್ತು ಭೂಮಿಯಲ್ಲಿ ದೇವನ ಪ್ರಭುತ್ವ ಸ್ಥಾಪನೆಯೇ ಮಾನವ ಆತ್ಮದ ಗುರಿಯೆಂದು ಸಾರಿರುವ ಧರ್ಮಗಳು ಲೌಕಿಕ ಸಾಧನಗಳನ್ನು ಬಳಸುವುದರ ಕುರಿತು, ಕೀರ್ತನೆ, ಆರಾಧನೆ ಮತ್ತು ಸಾಮಾಜಿಕ-ಸಾಮೂಹಿಕ ವ್ಯವಹಾರ ಇತ್ಯಾದಿ ವಿಷಯಗಳಲ್ಲಿ ಸಮತೋಲನದ ಶಿಕ್ಷಣವನ್ನು ನೀಡಿವೆ.

ಧರ್ಮಗಳ ನಡುವಿನ ಭಿನ್ನತೆಯು ವಿಶ್ವಾಸ, ಆರಾಧನೆ ಮತ್ತು ಆತ್ಮಸಂಸ್ಕರಣೆ ಗಳಿಗಷ್ಟೇ ಸೀಮಿತವಾಗಿರುವುದಲ್ಲ. ಬದಲಾಗಿ ಅವುಗಳ ನೈತಿಕ ಶಿಕ್ಷಣ ಮತ್ತು ಜೀವನ ವ್ಯವಸ್ಥೆಗಳಲ್ಲೂ ಭಿನ್ನತೆಯಿದೆ. ಉದಾಹರಣೆಗೆ: ಒಂದು ಧರ್ಮದಲ್ಲಿ ಅಹಿಂಸೆಯು ಮೂಲಭೂತ ವಿಶ್ವಾಸವಾಗಿದ್ದರೆ, ಇನ್ನೊಂದು ಧರ್ಮದಲ್ಲಿ ಅದು ಕೇವಲ ಉನ್ನತ ಮೌಲ್ಯವಾಗಿದೆ. ಒಂದು ಧರ್ಮದಲ್ಲಿ ನಗ್ನತೆಯು ವೈರಾಗ್ಯ ಮತ್ತು ಮನೋನಿಗ್ರಹದ ಮಾದರಿಯಾದರೆ, ಇನ್ನೊಂದು ಧರ್ಮದ ದೃಷ್ಟಿಯಲ್ಲಿ ಅದು ಅಪ್ರಿಯ ಮತ್ತು ಅಶ್ಲೀಲ ಕೃತ್ಯವೆನಿಸುತ್ತದೆ. ಒಂದು ಧರ್ಮದಲ್ಲಿ ಮಾನವನು ಜಾತಿಯ ಆಧಾರದಲ್ಲಿ ತಾಯಿಯ ಗರ್ಭದಿಂದ ಉನ್ನತನಾಗಿಯೋ ಅಧಮನಾಗಿಯೋ ಹುಟ್ಟುತ್ತಾನೆ ಮತ್ತು ಮರಣದ ವರೆಗೂ ಅದೇ ಸ್ಥಿತಿಯಲ್ಲಿ ಇರುತ್ತಾನೆ ಎಂಬ ನಂಬಿಕೆಯಿದ್ದರೆ, ಇನ್ನೊಂದು ಧರ್ಮದ ಪ್ರಕಾರ ಆದಿಮಾನವನ ಸಕಲ ಸಂತಾನವು ಹುಟ್ಟಿನಿಂದ ಸಮಾನರೂ ಗೌರವಾರ್ಹರೂ ಆಗಿರುತ್ತಾರೆ. ಹುಟ್ಟು ಯಾವ ಮನೆತನದಲ್ಲೇ ಆಗಿರಲಿ. ಒಂದು ಧರ್ಮದ ದೃಷ್ಟಿಯಲ್ಲಿ ವರ್ಣ ತಾರತಮ್ಯವು ಶಾಶ್ವತ ಮತ್ತು ಸಮಾನತೆಯು ತಾತ್ಕಾಲಿಕವಾಗಿದ್ದರೆ, ಇನ್ನೊಂದು ಧರ್ಮದ ಪ್ರಕಾರ ಸಮಾನತೆಯು ಪ್ರಧಾನವಾಗಿದ್ದು, ಭಿನ್ನತೆ ಮತ್ತು ತಾರತಮ್ಯವು ಮಾನವ ಸಮಾಜದ ಸೃಷ್ಟಿಯಾಗಿದೆ.

---

# ಸರ್ವಧರ್ಮ ಸಮಭಾವ

ನಾನು ಈ ಮೇಲೆ ತಿಳಿಸಿರುವ ಭಿನ್ನತೆಗಳನ್ನು ಕೆಲವರು ವಾಸ್ತವಿಕವೆಂದು ಭಾವಿಸುವುದಿಲ್ಲ. ಅವರು ಅದನ್ನು ನನ್ನ ಬಾಹ್ಯ ಅವಲೋಕನ ಮತ್ತು ಸಂಕುಚಿತ ದೃಷ್ಟಿಕೋನದ ಫಲವೆಂದು ಹೇಳುತ್ತಾರೆ. ಇಲ್ಲಿ ನಾನು ಅವರ ವಿಶ್ವಾಸವನ್ನು ಸಂದೇಹಿಸುವುದಿಲ್ಲ. ಆದರೆ ನನಗೆ ಅವರ ಅಭಿಪ್ರಾಯದೊಂದಿಗೆ ಸಹಮತವಿಲ್ಲ. ಧರ್ಮಗಳ ನಡುವೆ ವಾಸ್ತವವಾಗಿ ಯಾವೆಲ್ಲ ವಿಷಯದಲ್ಲಿ ಸಹಮತವಿದೆಯೆಂಬುದನ್ನು ಈಗಾಗಲೇ ಸವಿಸ್ತಾರವಾಗಿ ವಿವರಿಸಿದ್ದೇನೆ. ಅದರ ಹೊರತು ಬೇರಾವುದೇ ವಿಷಯದಲ್ಲಿ ಸಹಮತ ನನಗೆ ಕಾಣುತ್ತಿಲ್ಲ. ಇನ್ನು ಯಾವೆಲ್ಲ ವಿಷಯಗಳಲ್ಲಿ ನಾನು ಸಹಮತವನ್ನು ಕಾಣುತ್ತೇನೋ ಅವೆಲ್ಲವೂ ನನ್ನ ದೃಷ್ಟಿಯಲ್ಲಿ ಪ್ರತಿಯೊಂದು ಧರ್ಮದ ಪ್ರಮುಖ ಮತ್ತು ಮೂಲಭೂತ ಅಂಶಗಳಾಗಿವೆ. ಇದನ್ನೂ ನಾನು ಹಲವು ಬಾರಿ ಸ್ಪಷ್ಟಪಡಿಸಿದ್ದೇನೆ. ಅದೇ ರೀತಿ ಯಾವೆಲ್ಲ ವಿಷಯದಲ್ಲಿ ನನಗೆ ಭಿನ್ನತೆ ಕಾಣುತ್ತದೋ ಅವು ಪ್ರಮುಖ ಮತ್ತು ಮೂಲಭೂತವಾಗಿವೆ. ಅಂದರೆ ಧರ್ಮಗಳ ನಡುವೆ ಸಹಮತವೂ ವಾಸ್ತವಿಕವಾಗಿವೆ, ಭಿನ್ನಮತವೂ ವಾಸ್ತವಿಕವೇ ಆಗಿದೆ. ಈ ಭಿನ್ನತೆಯು ಬಾಹ್ಯದೃಷ್ಟಿಯ ಪರಿಣಾಮವೂ ಅಲ್ಲ, ಸಹಮತವು ಸದ್ಭುಮಾನಿಯೂ ಅಲ್ಲ. ನನ್ನ ದೃಷ್ಟಿಯಲ್ಲಿ ಮಹತ್ವಪೂರ್ಣ ಮತ್ತು ಮಹತ್ವಹೀನ ಅಥವಾ ಮೂಲಭೂತ ಮತ್ತು ಅಪ್ರಾಮುಖ್ಯ ಎಂಬುದೆಲ್ಲ ತಾತ್ಕಾಲಿಕ ವಿಷಯಗಳಾಗಿವೆ. ಪ್ರತಿಯೊಂದು ಧರ್ಮದ ಅನುಯಾಯಿಗಳು ಯಾವೆಲ್ಲ ವಿಷಯವನ್ನು ಮಹತ್ವಪೂರ್ಣ ಮತ್ತು ಮೂಲಭೂತವೆಂದು ಹೇಳುತ್ತಾರೋ ಅವೆಲ್ಲವನ್ನೂ ನಾನೂ ಮಹತ್ವಪೂರ್ಣ ಎಂದು ಹೇಳಲು ಸಿದ್ಧನಿದ್ದೇನೆ. ಅಂತೆಯೇ ಪ್ರತಿಯೊಂದು ಧರ್ಮದ ಅನುಯಾಯಿಗಳು ಯಾವುದನ್ನೆಲ್ಲ ಮಹತ್ವಹೀನವೆಂದು ಪರಿಗಣಿಸುತ್ತಾರೋ ಅವುಗಳನ್ನು ನಾನೂ ಮಹತ್ವ ಹೀನವೆಂದು ಹೇಳಲು ಸಿದ್ಧನಿದ್ದೇನೆ.

ಡಾ| ಭಗವಾನ್ ದಾಸ್‌ರವರು ತಮ್ಮ 'ದಿ ಎಸ್ಸೆಂಶಿಯಲ್ ಯುನಿಟಿ ಆಫ್ ಆಲ್ ರಿಲೀಜನ್ಸ್' (The Essential Unity of All Religions) ಎಂಬ ಗ್ರಂಥದಲ್ಲಿ "ಧರ್ಮಗಳು ಕೇವಲ ಮೂಲಭೂತ ಮೌಲ್ಯಗಳಲ್ಲಿ ಮಾತ್ರ ಸಹಮತ ಹೊಂದಿರುವುದಲ್ಲ, ಬದಲಾಗಿ ವಿಶ್ವಾಸ, ಆರಾಧನೆ, ನೈತಿಕ ಮತ್ತು ಸಾಮಾಜಿಕ ನಿಯಮಗಳಲ್ಲಿಯೂ ಮೂಲಭೂತವಾಗಿ ಸಹಮತ ಹೊಂದಿವೆ. ಅವುಗಳ ನಡುವೆ ಭಿನ್ನತೆಯೇನಿದ್ದರೂ ಮಹತ್ವಹೀನ ವಿಷಯಗಳಲ್ಲಿ ಮಾತ್ರವಿರುವುದು" ಎಂಬ ವಾದ ಮಂಡಿಸಿದ್ದರು.

ಅವರ ಅಭಿಪ್ರಾಯದಲ್ಲಿ ಪ್ರಾಚೀನ ಮತ್ತು ಸಾರ್ವಕಾಲಿಕವಾಗಿರುವ ಧರ್ಮವೊಂದಿದೆ. (ಅದರ ಕೆಲವು ಪ್ರಮುಖ ಅಂಶಗಳು ಎಲ್ಲ ಧರ್ಮಗಳಲ್ಲೂ ಬೇರೆ ಬೇರೆ ರೂಪದಲ್ಲಿ ಇವೆ. ಅದಕ್ಕೆ ಹೊರತಾಗಿರುವವುಗಳೆಲ್ಲವೂ ನಶ್ವರ ಮತ್ತು ಅಲ್ಪಕಾಲಿಕವಾಗಿದೆ.) ಅವರ ಪ್ರಕಾರ, ಸಕಲ ಧರ್ಮಗಳೂ ತಮ್ಮಲ್ಲಿರುವ ಮಹತ್ವಹೀನ ಮತ್ತು ತಾತ್ಕಾಲಿಕ ಭಿನ್ನಾಭಿಪ್ರಾಯಗಳನ್ನು ಬದಿಗಿರಿಸಿ ಆ ಪ್ರಾಚೀನ ಮತ್ತು ಸಾರ್ವಕಾಲಿಕವಾದ ಧರ್ಮದಲ್ಲಿ ವಿಲೀನವಾಗಬೇಕು. ಅದರ ಸಂಯುಕ್ತ ಆಶ್ರಯದಲ್ಲಿ ಜೀವನದ ಪುನರ್ ನಿರ್ಮಾಣವಾಗಬೇಕು. ಇದರಲ್ಲಿಯೇ ಮಾನವನ ಮೋಕ್ಷ ಅಡಗಿದೆ.

ಆ ಪ್ರಾಚೀನ ಮತ್ತು ಸಾರ್ವಕಾಲಿಕ ಧರ್ಮದ ಬಗ್ಗೆ ಅವರು ನೀಡಿರುವ ಒಟ್ಟು ವಿವರಣೆಯ ಸಾರಾಂಶವೇನೆಂದರೆ, ಈ ಜಗತ್ತು ವಾಸ್ತವದಲ್ಲಿ ಒಂದು ಮಹೋನ್ನತವಾದ ಮಾನವಾತೀತ ಅಸ್ತಿತ್ವದ ಪ್ರಕಟನೆಯಾಗಿದೆ. ಸಕಲ ಚರಾಚರಗಳು ಮತ್ತು ಮಾನವರು ಆ ಮಾನವಾತೀತ ಹಾಗೂ ಸೀಮಾತೀತ ಅಸ್ತಿತ್ವದ ಪರಿಮಿತ ಪ್ರಕಟ ರೂಪವಾಗಿದ್ದಾರೆ. ಮಾನವನ ಎಲ್ಲ ಪರಿಶ್ರಮಗಳ ಅಂತಿಮ ಉದ್ದೇಶವು ತನ್ನ ಮಾನವೀಯ ಮತ್ತು ಸೀಮಿತ ಅಸ್ತಿತ್ವವನ್ನು ಆ ಮಾನವಾತೀತ ಮತ್ತು ಸಮಗ್ರ ಅಸ್ತಿತ್ವದಲ್ಲಿ ವಿಲೀನಗೊಳಿಸುವುದಾಗಿದೆ. ಯಾವ ರೀತಿ ನೀರ ಹನಿಯು ಸಮುದ್ರ ಸೇರಿ ಅದರ ವಿಶಾಲತೆಯಲ್ಲಿ ವಿಲೀನವಾಗುತ್ತದೋ, ಅದೇ ರೀತಿ ಮಾನವ ಆತ್ಮವು ಆ ಸಮಗ್ರ ಅಸ್ತಿತ್ವದಲ್ಲಿ ಸೇರಿ ಅನಂತದಲ್ಲಿ ಲೀನವಾಗುವುದಾಗಿದೆ. ಇದರಲ್ಲಿಯೇ ಮಾನವ ಯಶಸ್ಸು ಮತ್ತು ಮೋಕ್ಷ ಅಡಗಿದೆ.

ಈ ಏಕಧರ್ಮ ವಾದವು ಒಂದು ಸಿದ್ಧಾಂತವೆಂಬ ನೆಲೆಯಲ್ಲಿ ಎಂತಹ ಮಹತ್ವವನ್ನು ಪಡೆದಿದೆ ಎಂಬ ಪ್ರಶ್ನೆ ಬೇರೆ. ಅದೇ ರೀತಿ ಕೆಲವು ಯೋಗಿಗಳು ಮತ್ತು ಸೂಫಿಗಳು ಈ ಸಿದ್ಧಾಂತವನ್ನು ತಮ್ಮ ಆಧ್ಯಾತ್ಮಿಕ ಘಟನೆಗಳಿಗೆ ಎಷ್ಟಂಶ ಪೂರಕವಾಗಿ ಕಾಣುತ್ತಾರೆ ಎಂಬ ಪ್ರಶ್ನೆಯೂ ಏಳುತ್ತದೆ. ಆದರೆ ಐತಿಹಾಸಿಕ ಧರ್ಮಗಳಿಗೆ ಸಂಬಂಧಿಸಿ ಹೇಳುವುದಾದರೆ, ಅವುಗಳ ಪೈಕಿ ಯಾವ ಧರ್ಮವನ್ನೂ ಸರ್ವಧರ್ಮ ಸಮಭಾವದ ಸಿದ್ಧಾಂತದಲ್ಲಿ ನೆಲೆಗೊಳಿಸಲಾಗಿಲ್ಲ. ಇನ್ನು ಇಸ್ಲಾಮಿಗೆ ಸಂಬಂಧಿಸಿ ಹೇಳುವುದಾದರೆ, ಅದರಲ್ಲಿ ದೇವನ ಕಲ್ಪನೆಯು ಒಂದು ವೈಯಕ್ತಿಕ ಅಸ್ತಿತ್ವ ಎಂಬುದಾಗಿದೆ. ದೇವ ಮತ್ತು ಮಾನವನ ಸಂಬಂಧವು ಒಡೆಯ ಮತ್ತು ಗುಲಾಮನ ಮಧ್ಯೆ ಇರುವಂತಹದ್ದೇ ವೈಯಕ್ತಿಕ ಸಂಬಂಧವಾಗಿದೆ. ಮಾನವನು ತನ್ನ ಭೌತಿಕ ಅಸ್ತಿತ್ವವನ್ನು ನಾಶಪಡಿಸಿ, ದೇವನ ಅಸ್ತಿತ್ವದಲ್ಲಿ ವಿಲೀನವಾಗುವುದು ಅವನ ಪರಮ ಗುರಿಯೆಂಬುದು ಇಸ್ಲಾಮ್‌ನ ಶಿಕ್ಷಣವಲ್ಲ; ಬದಲಾಗಿ, ದೇವ ಶಾಸನಗಳ ಪಾಲನೆ ಮತ್ತು ದೇವ ಸಂಪ್ರೀತಿಯನ್ನು ಅರಸುವ ಹಾದಿಯ ಮೂಲಕ ದೇವಸಾಮಿಪ್ಯ ಗಳಿಸಿ, ತನ್ನ ವೈಯಕ್ತಿಕ ಅಸ್ತಿತ್ವವನ್ನು ಸಂಪೂರ್ಣಗೊಳಿಸಬೇಕು ಎಂಬುದೇ ಇಸ್ಲಾಮಿನ ಶಿಕ್ಷಣವಾಗಿದೆ. ಡಾ| ಭಗವಾನ್‌ದಾಸರು ಇಸ್ಲಾಮಿನ ಅಧ್ಯಯನ ನಡೆಸುವಾಗ ಮುಸ್ಲಿಮ್ ಸೂಫಿಗಳೆಂಬ ಬೆರಳೆಣಿಕೆಯ ಮಂದಿಯನ್ನು ಗಮನದಲ್ಲಿರಿಸಿದ್ದರು. ಒಂದು ವೇಳೆ ಅವರು ಸಂಪೂರ್ಣ ಇಸ್ಲಾಮೀ ಆಧ್ಯಾತ್ಮಿಕತೆಯನ್ನು ಅಭ್ಯಸಿಸಿರುತ್ತಿದ್ದರೆ, ತಮ್ಮ ಏಕಧರ್ಮವಾದವನ್ನು ಮುಸ್ಲಿಮ್ ಸೂಫಿಯುಂನ ದೃಷ್ಟಿಕೋನ ಎಂದು ಖಂಡಿತವಾಗಿಯೂ ಸಾರುತ್ತಿರಲಿಲ್ಲ. ಒಂದು

ವೇಳೆ, ಅವರು ಪವಿತ್ರ ಕುರ್‌ಆನ್ ಮತ್ತು ಪ್ರವಾದಿಚರ್ಯೆಯ ಅಧ್ಯಯನ ನಡೆಸುತ್ತಿದ್ದರೆ, ಖಂಡಿತವಾಗಿಯೂ ಈ ಸಿದ್ಧಾಂತವನ್ನು ಇಸ್ಲಾಮಿಗೆ ಜೋಡಿಸುತ್ತಿರಲಿಲ್ಲ.

ಡಾ| ಭಗವಾನ್‌ದಾಸ್‌ರ ಏಕಧರ್ಮ ಸಿದ್ಧಾಂತವು ಇಸ್ಲಾಮ್‌ಗೆ ಅಪಥ್ಯವಾಗುವುದು ಮಾತ್ರವಲ್ಲ, ಕ್ರೈಸ್ತ ಮತ್ತು ಯಹೂದೀ ಧರ್ಮಗಳಿಗೂ ಸರಿ ಹೊಂದುವುದಿಲ್ಲ. ಕೆಲವು ಕ್ರೈಸ್ತ ಸನ್ಯಾಸಿಗಳು ತಮ್ಮ ಆಧ್ಯಾತ್ಮಿಕ ಘಟನೆಗಳನ್ನು ವಿವರಿಸುವಾಗ ಏಕಧರ್ಮ ಸಿದ್ಧಾಂತವನ್ನು ಉಲ್ಲೇಖಿಸಿದ್ದಿದೆ. ಆದರೆ ಅದು ಎಂದೂ ಸಂಪೂರ್ಣ ಕ್ರೈಸ್ತಧರ್ಮದ ಅಂಶವಾಗಿಲ್ಲ ಮತ್ತು ಅದಕ್ಕೆ ಎಂದೂ ಸಮರ್ಥನೆ ದೊರೆತಿರಲಿಲ್ಲ. ಭಾರತೀಯ ಧರ್ಮಗಳಿಗೂ ಅವರ ದೃಷ್ಟಿಕೋನ ಸರಿ ಹೊಂದುವುದಿಲ್ಲ. ಜೈನ ಮತ್ತು ಬೌದ್ಧ ಧರ್ಮಗಳ ಚಿಂತನೆಗಳೆಂದೂ ಏಕಧರ್ಮ ಸಿದ್ಧಾಂತಕ್ಕೆ ಪೂರಕವಾಗಿಲ್ಲ. ಉಪನಿಷತ್ತುಗಳ ಹೆಚ್ಚಿನ ಚಿಂತನೆಗಳು ಅದಕ್ಕೆ ಪೂರಕವಾಗಿ ಕಾಣುತ್ತವೆಯಾದರೂ ಅವು ಕೇವಲ ಹಿಂದೂ ಯೋಗಿಗಳ ಆಧ್ಯಾತ್ಮಿಕ ಚಿಂತನೆಗಳ ಫಲವಾಗಿದೆ. ಅದು ಹಿಂದೂ ಧರ್ಮದ ವ್ಯಾಖ್ಯಾನ ಖಂಡಿತ ಅಲ್ಲ. ಹಿಂದೂ ಧರ್ಮದಲ್ಲಿರುವ ನಿರ್ದಿಷ್ಟ ವಿಶ್ವಾಸ ಮತ್ತು ಪೂಜೆ-ಉಪಾಸನೆಯ ವಿಧಾನಗಳು, ನೈತಿಕ ಮೌಲ್ಯಗಳು ಮತ್ತು ಸಾಮಾಜಿಕ ವ್ಯವಸ್ಥೆ ಇದ್ಯಾವುದೂ ಉಪನಿಷತ್ತುಗಳ ಏಕಧರ್ಮ ಸಿದ್ಧಾಂತಕ್ಕೆ ಹೋಲಿಕೆಯಾಗುವುದಿಲ್ಲ. ಹಿಂದೂ ಧರ್ಮದ ಹುಟ್ಟು ಮತ್ತು ಬೆಳವಣಿಗೆಯಲ್ಲಿ ಈ ಸಿದ್ಧಾಂತಕ್ಕೆ ಯಾವುದೇ ಪಾತ್ರವಿಲ್ಲ.

ಸರ್ವಧರ್ಮ ಸಮಭಾವ (ಏಕಧರ್ಮ) ಸಿದ್ಧಾಂತವು ಸೂಫಿ ಪಂಥ ಮತ್ತು ದರ್ಶನ ಶಾಸ್ತ್ರದ ಸೃಷ್ಟಿಯಾಗಿದೆ. ಸೂಫಿಗಳ ಮನಸ್ಸಿನಲ್ಲಿ ಒಂದು ಹಂತದಲ್ಲಿ ಉದ್ಭವವಾಗುವ ಚಿಂತನೆಗಳೇ ಈ ಸಿದ್ಧಾಂತದ ಮೂಲವಾಗಿದೆ. ಸೂಫಿಗಳು ಈ ಹಂತದಿಂದ ಮುಂದೆ ಹೋಗಿ ಇನ್ನೂ ಉನ್ನತಿಗೆ ಏರಿದಾಗ, ಅವರಿಗೆ ಸತ್ಯವು ಬೇರೆಯೇ ರೂಪದಲ್ಲಿ ಕಾಣ ತೊಡಗುತ್ತದೆ. ಆ ಹಂತದಲ್ಲಿ ಸೃಷ್ಟಿಕರ್ತ ಮತ್ತು ಸೃಷ್ಟಿಯ ನಡುವಿನ ವ್ಯತ್ಯಾಸವು ಸ್ಪಷ್ಟವಾಗಿ ಗೋಚರಿಸುತ್ತದೆ ಮತ್ತು ಪ್ರವಾದಿಗಳು ನೀಡಿರುವ ಧರ್ಮದ ವ್ಯಾಖ್ಯಾನವೇ ಸರಿಯೆಂದು ಮನವರಿಕೆಯಾಗುತ್ತದೆ. ಇಸ್ಲಾಮಿನ ಸೂಫಿಗಳ ಪೈಕಿ ಹೆಚ್ಚಿನ ಹಿರಿಯರ ದೃಷ್ಟಿಯಲ್ಲಿ ಏಕಧರ್ಮ ಸಿದ್ಧಾಂತವು ಸತ್ಯದ ನೈಜ ವ್ಯಾಖ್ಯಾನವಲ್ಲ, ಬದಲಾಗಿ ಅದು ಸೂಫಿಝ್ಮಿನ ಅಪಕ್ವತೆಗೆ ಸಾಕ್ಷ್ಯವಾಗಿದೆ. ಒಂದು ಮಧ್ಯದ ಹಂತವನ್ನು ಆಧ್ಯಾತ್ಮಿಕ ಯಾತ್ರೆಯ ಅಂತಿಮ ಹಂತವೆಂದು ಭಾವಿಸುವ ತಪ್ಪನ್ನು ಸೂಫಿಗಳು ಎಸಗಿರುವಂತೆಯೇ ಉಪನಿಷತ್ತುಗಳ ಯೋಗಿಗಳೂ ಎಸಗಿದ್ದಾರೆ.

ಏಕಧರ್ಮ ಕಲ್ಪನೆಯನ್ನು ಧರ್ಮಗಳ ಸಂಯೋಜನೆಯೆಂಬ ಅರ್ಥದಲ್ಲಿ ನೋಡುವವರು ವಾಸ್ತವದಲ್ಲಿ ಸೂಫಿಝ್ಮ್ ಮತ್ತು ಧರ್ಮದ ನಡುವಿನ ಮೂಲಭೂತ ವ್ಯತ್ಯಾಸದಿಂದ ಅಜ್ಞರಾಗಿದ್ದಾರೆಂದೇ ಹೇಳಬೇಕಾಗುತ್ತದೆ. ಪ್ರತಿಯೊಂದು ಧರ್ಮವೂ ಸತ್ಯಕ್ಕೆ ಸಂಬಂಧಿಸಿ ತನ್ನದೇ ಆದ ದೃಷ್ಟಿಕೋನವನ್ನು ಹೊಂದಿದೆ. ಹಾಗೆಯೇ ಒಳಿತು-ಕೆಡುಕುಗಳ ಕುರಿತು ಸ್ವಂತ ಮಾನದಂಡ ಹಾಗೂ ಜೀವನ ನಿರ್ಮಾಣ ಕಲೆಯಲ್ಲಿ ತನ್ನದೇ ಆದ ಪ್ರತ್ಯೇಕ ರೂಪುರೇಷೆಯನ್ನು ಹೊಂದಿದೆ. ಮಾತ್ರವಲ್ಲ ಇತರ ಸಿದ್ಧಾಂತಗಳನ್ನೂ ಮಾನದಂಡಗಳನ್ನೂ ರೂಪುರೇಷೆಗಳನ್ನೂ ತಪ್ಪು ಅಥವಾ ಕನಿಷ್ಠಪಕ್ಷ ಅಪೂರ್ಣವೆಂದು ಸಾರುತ್ತವೆ. ಈ ವಿಷಯವೇ ಧರ್ಮವೊಂದರ

ಪ್ರತ್ಯೇಕ ಅಸ್ತಿತ್ವ ಮತ್ತು ವಿಕಾಸಕ್ಕೆ ಆಧಾರ ಒದಗಿಸುತ್ತದೆ. ಸರ್ವಧರ್ಮ ಸಮಭಾವದ ಯೋಗಿ ಮತ್ತು ಸೂಫಿಗಳಿಗೆ ಸಂಬಂಧಿಸಿದ ಸಿದ್ಧಾಂತವು ಯಾವುದೇ ನಿರ್ದಿಷ್ಟ ಸತ್ಯದರ್ಶನ, ನೈತಿಕ ಮಾನದಂಡ ಮತ್ತು ಜೀವನ ನಿರ್ಮಾಣ ಕಲೆಯನ್ನು ಹೊಂದಿಲ್ಲ. ಅದನ್ನು ಉಂಟು ಮಾಡುವ ಸಾಮರ್ಥ್ಯವೂ ಅವುಗಳಿಗಿಲ್ಲ. ಅವರು ಒಮ್ಮೆ ಎಲ್ಲ ಸಿದ್ಧಾಂತಗಳನ್ನು ಸರಿಯೆಂದೂ ಎಲ್ಲ ಮಾನದಂಡ ಗಳನ್ನು ಪರಿಶುದ್ಧವೆಂದೂ ಎಲ್ಲ ರೂಪುರೇಷೆಗಳನ್ನು ಸತ್ಯವೆಂದೂ ಹೇಳಿದರೆ, ಮರುಕ್ಷಣವೇ ಪ್ರತಿಯೊಂದನ್ನೂ ಅಪೂರ್ಣ ಹಾಗೂ ಮಿಥ್ಯ ಮತ್ತು ತಪ್ಪೆಂದು ಸಾರಿ ಬಿಡುತ್ತಾರೆ. ವಸ್ತುತಃ ಅವರ ಬಳಿ ಸರಿ-ತಪ್ಪು, ಒಳಿತು-ಕೆಡುಕು, ಸತ್ಯ-ಮಿಥ್ಯಗಳ ನಡುವೆ ವ್ಯತ್ಯಾಸಕ್ಕೆ ಯಾವುದೇ ಮಾನದಂಡವಿರುವುದಿಲ್ಲ. ಸರ್ವಧರ್ಮ ಸಮಭಾವ ಸಿದ್ಧಾಂತವು ವಾಸ್ತವದಲ್ಲಿ ಧರ್ಮಗಳ ನಡುವಿನ ಸಮಾನ ಅಂಶಗಳನ್ನು ಹುಡುಕುವುದಿಲ್ಲ. ಬದಲಾಗಿ ಸ್ವಯಂ ಧರ್ಮಗಳನ್ನೇ ಮಿಥ್ಯವೆಂದು (Falsification) ಸಾರುವುದಾಗಿದೆ.

ಧರ್ಮಗಳ ನಡುವೆ ವೈಚಾರಿಕ ಒಗ್ಗಟ್ಟಿನ ಪ್ರಯತ್ನಕ್ಕೆ ಯುರೋಪಿಯನ್ ಸೂಫಿ ವಿದ್ವಾಂಸ ಎಫ್. ಶಿಯೋನ್‌ರವರ 'The Transcendental Unity of Religions' ಎಂಬ ಕೃತಿಯು ಇನ್ನೊಂದು ಉದಾಹರಣೆಯಾಗಿದೆ. ಶಿಯೋನ್‌ರ ಪ್ರಕಾರ, ಸತ್ಯವು ಎರಡು ತರಹದ್ದಾಗಿದೆ. ಅಲೌಕಿಕ ಮತ್ತು ಧಾರ್ಮಿಕ. ಅಲೌಕಿಕ ಸತ್ಯವು ಒಂದೇ ಆಗಿದ್ದು, ಧಾರ್ಮಿಕ ಸತ್ಯವು ಅನೇಕ ರೂಪದಲ್ಲಿರುತ್ತದೆ. ಆದರೆ ಈ ಎಲ್ಲ ಧಾರ್ಮಿಕ ತಥ್ಯಗಳು ಆ ಒಂದು ಅಲೌಕಿಕ ಸತ್ಯದ ವಿಭಿನ್ನ ರೂಪಗಳಾಗಿವೆ. ಶಿಯೋನ್‌ರ ಅಲೌಕಿಕ ಸತ್ಯವು ಡಾ| ಭಗವಾನ್‌ದಾಸ್‌ರ ಏಕಧರ್ಮ ಸಿದ್ಧಾಂತಕ್ಕಿಂತ ಭಿನ್ನವೇನೂ ಅಲ್ಲ. ಅದೇ ವೇಳೆ, ಅಲೌಕಿಕ ಸತ್ಯವು ಧಾರ್ಮಿಕ ಸತ್ಯಕ್ಕಿಂತ ಪ್ರತ್ಯೇಕವಾದ ಒಂದು ವಸ್ತುವಾಗಿದೆ ಎಂಬುದನ್ನು ಶಿಯೋನ್ ಒಪ್ಪುತ್ತಾರೆ. ಆದರೆ ಅವರಿಗೆ ಅವುಗಳ ನಡುವಿನ ವ್ಯತ್ಯಾಸದ ಅರಿವು ಇಲ್ಲ. ಈ ವ್ಯತ್ಯಾಸವು ಅವರ ಮುಂದೆ ಸ್ಪಷ್ಟವಾಗಿ ಅನಾವರಣಗೊಳ್ಳುತ್ತಿದ್ದರೆ ಅವರು ಖಂಡಿತ ವಾಗಿಯೂ ಧಾರ್ಮಿಕ ಸತ್ಯವನ್ನು ಅಲೌಕಿಕ ಸತ್ಯದ ವಿಭಿನ್ನ ರೂಪ ಮತ್ತು ಆವಿರ್ಭಾವ ಗಳೆಂದು ಹೇಳುತ್ತಿರಲಿಲ್ಲ. ನೀವು ಅಲೌಕಿಕ ಸತ್ಯವೆನ್ನಿ ಅಥವಾ ಏಕಧರ್ಮ ಸಿದ್ಧಾಂತವೆನ್ನಿ, ಅವೆರಡೂ ಸೂಫಿ ಚಿಂತನೆಗಳನ್ನು ಆಧರಿಸಿವೆ. ಅದಕ್ಕೂ ಐತಿಹಾಸಿಕ ಧರ್ಮಕ್ಕೂ ಯಾವುದೇ ಸಂಬಂಧವಿಲ್ಲ.

# ಧರ್ಮ ಮತ್ತು ರಾಷ್ಟ್ರೀಯ ಭಾವೈಕ್ಯ

ಧರ್ಮಗಳ ನಡುವೆ ಸೈದ್ಧಾಂತಿಕ ಏಕತ್ವವನ್ನು ಹುಡುಕುವ ಇತರ ಪ್ರಯತ್ನಗಳನ್ನು ಇಲ್ಲಿ ಉಲ್ಲೇಖಿಸುವುದರಿಂದ ಯಾವುದೇ ಪ್ರಯೋಜನವಿಲ್ಲ. ಮಾತ್ರವಲ್ಲ, ಈ ಕಿರುಕೃತಿಯಲ್ಲಿ ಅದಕ್ಕೆ ಅವಕಾಶವೂ ಇಲ್ಲ. ಆದರೆ ಆ ಪ್ರಯತ್ನಗಳ ಅಗತ್ಯವಾದರೂ ಏನು ಎಂಬ ಪ್ರಶ್ನೆಯು ಸಹಜವಾಗಿ ಏಳುತ್ತದೆ. ನಾನು ಈಗಾಗಲೇ ವಿವರವಾಗಿ ಉಲ್ಲೇಖಿಸಿರುವ ಸಾಮಾನ್ಯ ಮಾನವೀಯ ಮೌಲ್ಯಗಳಲ್ಲಿ ವಿವಿಧ ಧರ್ಮಗಳು ಹೊಂದಿರುವ ಸಹಮತವು ಆ ಧರ್ಮಗಳನ್ನು ಪರಸ್ಪರ ನಿಕಟಗೊಳಿಸಲು ಸಾಕಾಗಲಾರದೇ? ಧರ್ಮಗಳನ್ನು ಒಂದು ಮಾನವೀಯ ಸಂಬಂಧದಲ್ಲಿ ಜೋಡಿಸಿಡಲು ಮತ್ತು ಶಾಂತಿ-ಸಮಾಧಾನದಿಂದಿರಲು ಆ ಮೌಲ್ಯಗಳು ಸಾಕಲ್ಲವೇ? ಪರಸ್ಪರ ಪ್ರೀತಿ, ನಿಷ್ಠೆ, ನ್ಯಾಯ, ದಯೆ, ತ್ಯಾಗಪೂರ್ಣವಾಗಿ ವ್ಯವಹರಿಸಲು ಆ ಮಾನವೀಯ ಮೌಲ್ಯಗಳಿಗಿಂತ ಹೆಚ್ಚಿನದೇನಾದರೂ ಅಗತ್ಯವಿದೆಯೇ? ಪರಸ್ಪರ ಧಾರ್ಮಿಕ ಪರಂಪರೆಗಳು, ಮಹಾನ್ ವ್ಯಕ್ತಿತ್ವಗಳು ಮತ್ತು ಧಾರ್ಮಿಕ ಪ್ರತೀಕಗಳನ್ನು ಗೌರವಿಸಲು ಅಂತೆಯೇ ಶಾಂತಿಪೂರ್ಣವಾದ ಸಹಜೀವನ ನಡೆಸಲು ಹಾಗೂ ಸಭ್ಯ ಸಮಾಜ ನಿರ್ಮಿಸಲು ಆ ಸಾಮಾನ್ಯ ಮಾನವೀಯ ಮೌಲ್ಯಗಳು ಸಾಕಾಗಲಾರವೇ? ವಸ್ತುತಃ ಈ ಏಕರೂಪ ಮಾನವೀಯ ಮೌಲ್ಯಗಳು ಒಬ್ಬ ಉತ್ತಮ ವ್ಯಕ್ತಿ, ಉತ್ತರದಾಯಿ ನಾಗರಿಕ ಮತ್ತು ಒಂದು ಶಾಂತಿಪ್ರಿಯ ಸಮಾಜದ ವಾಸ್ತವಿಕ ಜೀವಾಳವಾಗಿದೆಯೆಂಬುದು ನನ್ನ ನಂಬಿಕೆ. ಇದಕ್ಕಿರುವ ಶರತ್ತು ಒಂದೇ. ಎಲ್ಲ ಧರ್ಮದ ಜನರೂ ಈ ಮೌಲ್ಯಗಳನ್ನು ಸತ್ಯದೊಂದಿಗೆ ಸ್ವೀಕರಿಸಬೇಕು. ಇದುವೇ ಮಹತ್ವಪೂರ್ಣ ಶರತ್ತಾಗಿದೆ; ಸಾಮಾನ್ಯ ವಾಸ್ತವಿಕ ಶಿಕ್ಷಣವಾಗಿರುವ ಆ ಮಾನವೀಯ ಮೌಲ್ಯಗಳಿಗೆ ಜನರು ತಮ್ಮ ಜೀವನದಲ್ಲಿ ತಂತಮ್ಮ ಧರ್ಮವು ಬಯಸುವ ಸ್ಥಾನವನ್ನು ನೀಡಿದ್ದೇ ಆದಲ್ಲಿ ಇಡೀ ಸಮಾಜದಲ್ಲಿ ಶಾಂತಿಯೇ ನೆಲೆಸುವುದು ಖಚಿತ.

ದುರದೃಷ್ಟವಶಾತ್, ಭಾರತದಲ್ಲಿ ರಾಷ್ಟ್ರೀಯ ಭಾವೈಕ್ಯ ಮತ್ತು ಸೌಹಾರ್ದತೆಯೇ ಒಂದು ಸಮಸ್ಯೆಯಾಗಿ ಬಿಟ್ಟಿದೆ. ಹೆಚ್ಚಿನವರು ಇಲ್ಲಿನ ಜಾತಿ ಮತ್ತು ಭಾಷೆಗಳಂತೆಯೇ ಧರ್ಮಗಳ ಆಧಿಕ್ಯವನ್ನೂ ದೇಶದ ಭಾವೈಕ್ಯ ಮತ್ತು ಸೌಹಾರ್ದಕ್ಕೆ ಅಡ್ಡಿಯೆಂದು ಭಾವಿಸುತ್ತಾರೆ. ಕೆಲವರು ಈ ಸಮಸ್ಯೆಗೆ ಪರಿಹಾರವನ್ನು ಸರ್ವಧರ್ಮ ಸಮಭಾವ ಕಲ್ಪನೆಯಲ್ಲಿ ಹುಡುಕುತ್ತಾರೆ. ಆದರೆ ಸರ್ವಧರ್ಮ ಸಮಭಾವ ಎಂಬ ಸಿದ್ಧಾಂತವು ಯಾವುದೇ ಧರ್ಮಕ್ಕೆ ಪರ್ಯಾಯವೆನಿಸಲಾರದು ಎಂಬುದು ಅವರಿಗೆ ತಿಳಿದಿಲ್ಲ. ಯಾವ ರೀತಿ ಅಧಿಕ ಭಾಷೆಗಳಿಗೆ ಪರ್ಯಾಯವಾಗಿ ಯಾವುದೋ ಒಂದು ಏಕರೂಪದ ಭಾಷೆಯನ್ನು ಹುಟ್ಟು ಹಾಕುವುದರಿಂದ

ಭಾಷಾ ಸಮಸ್ಯೆ ಪರಿಹಾರವಾಗುವುದಿಲ್ಲವೋ ಅದೇ ರೀತಿ ಹಲವು ಧರ್ಮಗಳಿಗೆ ಒಂದು ಪರ್ಯಾಯವೆಂಬಂತೆ ಒಂದು ಏಕರೂಪದ ಧರ್ಮವನ್ನು ಸೃಷ್ಟಿಸುವುದರಿಂದ ಅಥವಾ ಎಲ್ಲ ಧರ್ಮಗಳಿಂದಲೂ ಕೆಲವು ಅಂಶಗಳನ್ನು ಹೆಕ್ಕಿ, ಸೇರಿಸಿ ನೂತನ ಸಿದ್ಧಾಂತ (ದೀನೆ ಇಲಾಹಿ) ರೂಪಿಸುವುದರಿಂದ ಧರ್ಮಗಳ ಭಿನ್ನತೆ ಪರಿಹಾರವಾಗಲಾರದು.

ಇನ್ನು ಪ್ರಗತಿಪರರೆನಿಸಿಕೊಂಡವರು ಇನ್ನಷ್ಟು ಮುಂದುವರಿದು ಧರ್ಮಗಳನ್ನು ಭಿನ್ನಾಭಿಪ್ರಾಯ ಮತ್ತು ಒಡಕುಗಳಿಗೆ ಕಾರಣವೆಂದು ಸಾರುತ್ತಾರೆ. ಅವರ ದೃಷ್ಟಿಯಲ್ಲಿ ದೇವನ ಹೆಸರನ್ನೆತ್ತುವುದೇ ಭಿನ್ನತೆ ಮತ್ತು ಕ್ಷೋಭೆಯನ್ನು ಆಮಂತ್ರಿಸಿದಂತೆ. ಆ ಮಂದಿಗೆ ಧಾರ್ಮಿಕ ಕಲಹಗಳನ್ನು ತಡೆಯುವುದರಲ್ಲಿ ಯಾವುದೇ ಆಸಕ್ತಿಯಿಲ್ಲ. ಅವರು ಪ್ರತಿಯೊಂದು ಧರ್ಮವನ್ನು ಬುಡಸಮೇತ ಕಿತ್ತು ಹಾಕುವುದೇ ತಮ್ಮ ಪರಮಗುರಿಯೆಂದು ಭಾವಿಸುತ್ತಾರೆ. ಹಾಗಾಗಿ ಅಂತಹ ಮಂದಿ ಅಥವಾ ಗುಂಪುಗಳೇ ಕೋಮು ವೈಷಮ್ಯಕ್ಕೆ ಗಾಳಿಯೂದುತ್ತಾರೆ ಮಾತ್ರವಲ್ಲ, ಕೋಮು ಗಲಭೆಗಳಲ್ಲಿ ಸಕ್ರಿಯರಾಗಿ ಪಾಲ್ಗೊಳ್ಳುವುದು ಕೂಡಾ ಕಾಣುತ್ತದೆ. ಆ ಮೂಲಕ ಧರ್ಮಗಳ ಹೆಸರು ಕೆಡಿಸುವುದು ಮತ್ತು ಧಾರ್ಮಿಕ ಶಕ್ತಿಯನ್ನು ಕುಂದಿಸುವುದು ಅವರ ಉದ್ದೇಶವಾಗಿರುತ್ತದೆ. ಇವರು ಭಾರತವನ್ನು, ಅದರ ಸಾವಿರಾರು ವರ್ಷಗಳ ಪ್ರಾಚೀನ ಧಾರ್ಮಿಕ ಪರಂಪರೆಯಿಂದ ಕಡಿದು, ಅಧಾರ್ಮಿಕತೆಯ ಪಥದಲ್ಲಿ ನಡೆಸ ಬಯಸುತ್ತಾರೆ. ಆದರೆ ಧರ್ಮದ ಬೇರುಗಳು ಯಾರಿಂದಲೂ ಕಿತ್ತುಕೊಳ್ಳಲಾಗದಷ್ಟು ಬಲವಾಗಿ ಮಾನವ ಪ್ರಕೃತಿಯ ಅಂತರಾಳದಲ್ಲಿ ಊರಿ ಬಿಟ್ಟಿದೆ ಎಂಬುದನ್ನು ಆ ಜನರು ಅರಿತಿಲ್ಲ. ಇಂದು ಜಗತ್ತಿನಾದ್ಯಂತ ಧಾರ್ಮಿಕ ಪುನರುತ್ಥಾನ ಕಾರ್ಯಗಳು ಭರದಿಂದ ಸಾಗುತ್ತಿದ್ದು ಅದರ ಪ್ರಭಾವದಿಂದಾಗಿ ಇವರ ಬಾಲಿಶವಾದಕ್ಕೆ ಎಲ್ಲೂ ಮನ್ನಣೆ ದೊರೆಯುತ್ತಿಲ್ಲ. ಆದರೂ ಈ ಮಂದಿ ಅದರಿಂದ ಪಾಠ ಕಲಿಯಲು ಸಿದ್ಧರಿಲ್ಲ.

ರಾಷ್ಟ್ರೀಯ ಭಾವೈಕ್ಯ ಮತ್ತು ಸೌಹಾರ್ದಕ್ಕೆ ಧರ್ಮವೋ ಧರ್ಮಗಳ ಹೆಚ್ಚಳವೋ ಎಂದೂ ಅಡ್ಡಿಯಾಗಿಲ್ಲ. ವಾಸ್ತವದಲ್ಲಿ ಅಧಾರ್ಮಿಕತೆ ಮತ್ತು ಧರ್ಮದ ಹೆಸರಲ್ಲಿ ಇಂದು ತೀರಾ ನಿರ್ಲಜ್ಜೆಯಿಂದ ನಡೆಸಲಾಗುತ್ತಿರುವ ಧರ್ಮ ವಿರೋಧಿ ಕೃತ್ಯಗಳೇ ಸೌಹಾರ್ದಕ್ಕೆ ಪ್ರಮುಖ ತೊಡಕಾಗಿದೆ. ಧರ್ಮದ ಹೆಸರಲ್ಲಿ ಆಗುತ್ತಿರುವ ಕಲಹಗಳ ಹಿಂದೆ ಯಾವುದೇ ಧಾರ್ಮಿಕ ಭಾವನೆ ಕಾರ್ಯಾಚರಿಸುತ್ತಿಲ್ಲ, ಬದಲಾಗಿ ಕೆಲವು ಕ್ಷುಲ್ಲಕ, ವೈಯಕ್ತಿಕ ಮತ್ತು ಸಾಮುದಾಯಿಕ ಉದ್ದೇಶಗಳು ಹಾಗೂ ಭೌತಿಕ ಲಾಭ ಅವುಗಳ ಹಿಂದಿರುತ್ತವೆ. ಜಗಳವು ಮೇಲ್ನೋಟಕ್ಕೆ ಯಾವುದೋ ಸಾಮಾನ್ಯ ಘಟನೆಯೊಂದಿಗೆ ಆರಂಭವಾಗುತ್ತದೆ. ಒಂದು ವೇಳೆ ಜನರು ತಂತಮ್ಮ ಧರ್ಮಗಳ ನೈಜ ಶಿಕ್ಷಣದ ಆಧಾರದಲ್ಲಿ ಅದನ್ನು ಪರಿಹರಿಸಲು ಮುಂದಾದರೆ, ಖಂಡಿತವಾಗಿಯೂ ಆ ಸಾಮಾನ್ಯ ಘಟನೆಯು ದೊಡ್ಡ ದೊಂಬಿಯ ರೂಪ ತಾಳಲಾರದು. ಆದರೆ ಆ ಸಣ್ಣ ಕಿಡಿಯು ಭೀಕರ ಕೊಳ್ಳಿಯ ರೂಪ ತಾಳಿ ಜನರ ಜೀವ-ಸೊತ್ತು-ಮಾನಹರಣವಾಗುವುದರ ಹಿಂದೆ ನಿಜವಾಗಿ ಇರುವುದು ಧರ್ಮದ ಹೆಸರಲ್ಲಿ ನಡೆಸಲಾಗುತ್ತಿರುವ ವ್ಯವಸ್ಥಿತ ಧರ್ಮ ವಿರೋಧಿ ಸಂಚು ಮತ್ತು ಅಧಾರ್ಮಿಕತೆಯಾಗಿದೆ. ಆರ್ಥಿಕ ಮತ್ತು ರಾಜಕೀಯ ಲಾಭಗಳೇ ಅವುಗಳ ಏಕೈಕ ಉದ್ದೇಶವಾಗಿದೆ. ಈ ಪ್ರಯತ್ನಗಳು ಖಂಡಿತವಾಗಿಯೂ ಯಾವುದೇ ಧರ್ಮದ ಗೌರವ-ಘನತೆಗೆ ಕಾರಣವಾಗಲಾರವು. ಬದಲಾಗಿ ಧರ್ಮಕ್ಕೇ ಅವಮಾನ ಮತ್ತು ಕಳಂಕವಾಗಿವೆ.

# ಅಸಹಿಷ್ಣುತೆಗೆ ಕಾರಣಗಳು

ವಿವಿಧ ಧರ್ಮಗಳ ಅನುಯಾಯಿಗಳಲ್ಲಿ ಅಸಹಿಷ್ಣುತೆ ಮತ್ತು ಸಂಘರ್ಷಕ್ಕೆ ಇನ್ನೂ ಕೆಲವು ಕಾರಣಗಳಿವೆ.

## ಪ್ರಥಮ ಮತ್ತು ಮೂಲಭೂತ ಕಾರಣ

ಭಾರತವು ಕೇವಲ ಒಂದು ಧರ್ಮವನ್ನು ಅನುಸರಿಸುವವರ ದೇಶವಲ್ಲ, ಬದಲಾಗಿ ಸಾವಿರಾರು ವರ್ಷಗಳಿಂದ ಹಲವು ಧರ್ಮಗಳ ಅನುಯಾಯಿಗಳು ಬಾಳುತ್ತಿರುವ ದೇಶವಾಗಿದೆ ಎಂಬುದನ್ನು ಒಪ್ಪಲು ನಮ್ಮಲ್ಲಿ ಕೆಲವು ಮಂದಿ ಅಥವಾ ಗುಂಪು ಸಿದ್ಧವೇ ಇಲ್ಲ. ದೇಶವನ್ನು ತಮ್ಮ ಖಾಸಗಿ ಸೊತ್ತೆಂದೂ ಅನ್ಯರನ್ನು ವಿದೇಶೀಯರೆಂದೂ ಭಾವಿಸುತ್ತಾರೆ. ಆ ಮಂದಿ ಭಾರತೀಯತೆಗೆ ಇರಿಸಿದ ಶರತ್ತುಗಳ ಮುಖ್ಯಧಾರೆ ಹೇಗಿದೆ ನೋಡಿ- ಇತರ ಧರ್ಮಗಳ ಮಂದಿ ಇವರ ಧಾರ್ಮಿಕ ಪರಂಪರೆಯನ್ನೂ ಧಾರ್ಮಿಕ ನೇತಾರರನ್ನೂ ಅಂಗೀಕರಿಸಬೇಕು. ಅಂದರೆ, ಇನ್ನೊಂದು ಮಾತಿನಲ್ಲಿ ಹೇಳುವುದಾದರೆ, ಅವರ ಧರ್ಮದ ಪ್ರತಿಯೊಂದು ಅಂಶದ ಮೇಲೆ ವಿಶ್ವಾಸವಿರಿಸದೆ ಯಾರೂ ಭಾರತೀಯರೆನಿಸಿಕೊಳ್ಳಲು ಅರ್ಹರಲ್ಲ ಎಂದಾಗಿದೆ. ಯಾರಾದರೂ ಭಾರತೀಯರೆನಿಸಿಕೊಳ್ಳಬೇಕಾದರೆ ಈ ದೇಶ ದೊಂದಿಗೆ ನಿಷ್ಠೆ ಮತ್ತು ಪ್ರೀತಿಯಿದ್ದರೆ ಸಾಲದೆಂಬುದು ಈ ಮಂದಿಯ ವಾದವಾಗಿದೆ. ಈ ರೀತಿಯ ಮನಃಸ್ಥಿತಿಯಿರುತ್ತಾ ದೇಶದಲ್ಲಿ ಶಾಂತಿ, ಸಮಾಧಾನ ಸ್ಥಾಪನೆಯಾಗಲು ಸಾಧ್ಯವೇ?

## ಎರಡನೆಯ ಕಾರಣ

ಯಾರಾದರೂ ತನ್ನ ಧರ್ಮವನ್ನು ಸತ್ಯವೆಂದು ಭಾವಿಸುವುದು, ತನ್ನ ರೀತಿ-ರಿವಾಜು ಮತ್ತು ನಿಯಮಗಳನ್ನು ಉನ್ನತವೆಂದು ಭಾವಿಸುವುದು, ತನ್ನ ಪರಂಪರೆಗಳನ್ನು ಹಾಗೂ ಧಾರ್ಮಿಕ ವ್ಯಕ್ತಿತ್ವಗಳನ್ನು ಗೌರವಿಸುವುದು ಇತ್ಯಾದಿಗಳ ಬೇಡಿಕೆಯು, ತನ್ನ ಧರ್ಮವನ್ನು ಇತರರ ಮೇಲೆ ಹೇರುವುದೆಂದೋ ತನ್ನ ಪದ್ಧತಿಗಳನ್ನು ಇತರರು ಒಪ್ಪಿಕೊಳ್ಳುವಂತೆ ಬಲವಂತಪಡಿಸಬೇಕಾಗುವುದೆಂದೋ ಭಾವಿಸುವುದಾಗಿದೆ. ಒಂದು ವೇಳೆ ಅದು ಸಾಧ್ಯವಾಗದಿದ್ದರೆ, ಇತರರ ವಿಶ್ವಾಸ-ಆಚಾರಗಳ ಬಗ್ಗೆ ವ್ಯಂಗ್ಯವಾಡುವುದೋ ಅವರ ಆರಾಧನಾಲಯಗಳ ಅವಹೇಳನ ಮಾಡುವುದೋ ಅವರ ಧಾರ್ಮಿಕ ವ್ಯಕ್ತಿತ್ವ ಗಳನ್ನು ಹಳಿಯುವುದೋ ಇತ್ಯಾದಿ ಕೃತ್ಯಗಳನ್ನು ಎಸಗುವುದು. ವಾಸ್ತವದಲ್ಲಿ ಈ ಮೇಲಿನ ಎರಡೂ ವಿಷಯಗಳಿಗೆ ಯಾವುದೇ ಸಂಬಂಧವಿಲ್ಲ. ನಾನು ಒಂದು ವೇಳೆ ಯಾವುದಾದರೂ ವಿಶ್ವಾಸವನ್ನು ಸರಿಯೆಂದೂ ಉಳಿದವುಗಳನ್ನು ತಪ್ಪೆಂದೂ ಭಾವಿಸುತ್ತೇನೆಂದಾದರೆ, ಅದಕ್ಕಾಗಿ ನನಗೆ ಇತರರ ನಂಬಿಕೆ

ಮತ್ತು ಧರ್ಮದ ಬಗ್ಗೆ ವ್ಯಂಗ್ಯವಾಡುವ ಅಧಿಕಾರ ಹೇಗೆ ಪ್ರಾಪ್ತವಾಗಬೇಕು? ನಾನು ನನ್ನ ರೀತಿ-ರಿವಾಜುಗಳನ್ನು ಉತ್ತಮವೆಂದೂ ಇತರ ರೀತಿ-ರಿವಾಜುಗಳನ್ನು ಉತ್ತಮವಲ್ಲವೆಂದೂ ಭಾವಿಸಿದ ಮಾತ್ರಕ್ಕೆ ನನ್ನ ರೀತಿ-ರಿವಾಜನ್ನು ಇತರರ ಮೇಲೆ ಬಲವಂತವಾಗಿ ಹೇರುವುದು ಔಚಿತ್ಯವೆನಿಸಬಲ್ಲುದೇ? ಯಾರಾದರೊಬ್ಬ ವ್ಯಕ್ತಿ ಅಥವಾ ಗುಂಪು ಆ ರೀತಿ ವ್ಯವಹರಿಸಿದರೆ, ಆತ ಅಥವಾ ಆ ಗುಂಪು ಮಾನವತೆ ಮತ್ತು ಪ್ರಜಾತಂತ್ರವನ್ನು ಮಾತ್ರವಲ್ಲ, ತನ್ನ ಧಾರ್ಮಿಕ ಮೌಲ್ಯಗಳನ್ನೂ ಕೊಲೆಗೈಯುತ್ತಿದ್ದಾನೆಂದೇ ಅರ್ಥ.

## ಮೂರನೆಯ ಕಾರಣ

ನಮ್ಮಲ್ಲಿ ಹೆಚ್ಚಿನವರು ತನಗಾಗಿ ಬಯಸುವುದನ್ನು ಇತರರಿಗೂ ಬಯಸಲು ಸಿದ್ಧರಿರುವುದಿಲ್ಲ. ಉದಾಹರಣೆಗೆ: ನಮ್ಮ ಜೀವ-ಸೊತ್ತು ಸುರಕ್ಷಿತವಾಗಿರಬೇಕು, ನಮ್ಮ ಮಾನ-ಮರ್ಯಾದೆಗೆ ಏನೂ ಕುಂದುಂಟಾಗಬಾರದು, ನಮಗೆ ಶಿಕ್ಷಣ-ಪ್ರಗತಿಯ ಸಂಪೂರ್ಣ ಅವಕಾಶ ದೊರೆಯಬೇಕು, ನಮ್ಮವರಿಗೆ ಉನ್ನತ ಹುದ್ದೆಗಳು ದೊರೆಯಬೇಕು, ನಮ್ಮ ಧರ್ಮದ ಪ್ರಚಾರ-ಪ್ರಸಾರಕ್ಕೆ ಸಂಪೂರ್ಣ ಸ್ವಾತಂತ್ರ್ಯವಿರಬೇಕು, ನಮ್ಮ ಮಕ್ಕಳಿಗೆ ನಮ್ಮ ಧಾರ್ಮಿಕ ಶಿಕ್ಷಣ ದೊರೆಯುವಂತಾಗಬೇಕು, ನಮಗೆ ನಮ್ಮ ಧಾರ್ಮಿಕ-ಸಾಂಸ್ಕೃತಿಕ ಸಂಘ ಸಂಸ್ಥೆಗಳನ್ನು ಸ್ಥಾಪಿಸುವ, ನಡೆಸುವ ಹಕ್ಕು ದೊರೆಯಬೇಕು, ನಮ್ಮ ಭಾಷೆಯನ್ನು ಕಲಿಯುವ, ಕಲಿಸುವ, ಅಭಿವೃದ್ಧಿಪಡಿಸುವ ಸಕಲ ಸವಲತ್ತುಗಳು ನಮಗೆ ದೊರೆಯಬೇಕು ಎಂಬಿತ್ಯಾದಿಯಾಗಿ ಬಯಸುತ್ತಾರೆ. ಆದರೆ ಅವರು ಅದೇ ಹಕ್ಕುಗಳನ್ನು ಇತರ ಧರ್ಮೀಯರಿಗೆ ನೀಡಲು ಸಿದ್ಧರಾಗುವುದಿಲ್ಲ. ಅವರು ಸ್ವಯಂ ತಮ್ಮ ಹಕ್ಕುಗಳಿಗಿಂತ ಹೆಚ್ಚಿನದನ್ನು ಪಡೆಯ ಬಯಸುತ್ತಾರೆ. ಆದರೆ ಇತರರಿಗೆ ಅವರ ಅರ್ಹ ಹಕ್ಕುಗಳನ್ನು ನೀಡಲೂ ಮುಂದಾಗುವುದಿಲ್ಲ. ಅದೇ ವೇಳೆ, ಅವರ ಈ ವರ್ತನೆಯು ನ್ಯಾಯ-ಸಮಾನತೆಗೆ ವಿರುದ್ಧ ಮಾತ್ರವಲ್ಲ, ಸ್ವಯಂ ಅವರ ಧರ್ಮದ ಉನ್ನತ ಪರಂಪರೆ ಮತ್ತು ಮೌಲ್ಯಗಳಿಗೂ ವಿರುದ್ಧವಾಗಿವೆಯೆಂಬುದರ ಕಡೆಗೆ ಅವರು ಗಮನ ಕೊಟ್ಟಿರುವುದಿಲ್ಲ. ಇಂತಹ ವರ್ತನೆಯಿಂದ ನಮ್ಮ ಧರ್ಮದ ಗೌರವ ಹೆಚ್ಚುವುದಿಲ್ಲ. ಬದಲಾಗಿ ಇಡೀ ಜಗತ್ತಿನಲ್ಲಿ ಅದಕ್ಕೆ ಕಳಂಕ ತಟ್ಟಿ ಬಿಡುತ್ತದೆ.

ನನ್ನ ಮಟ್ಟಿಗೆ ಧರ್ಮಾನುಯಾಯಿಗಳಲ್ಲಿ ಅಸಹಿಷ್ಣುತೆ ಮತ್ತು ವೈಷಮ್ಯಕ್ಕೆ ಮೂರು ಮೂಲಭೂತ ಕಾರಣಗಳು ಇವೇ ಆಗಿವೆ. ಅವುಗಳಿಗೆ ಪರಿಹಾರ ಹೀಗಿದೆ:-

1. ನಾವು ಭಾರತವನ್ನು ಹಿಂದೂ, ಮುಸ್ಲಿಮ್, ಸಿಕ್ಖ್, ಕ್ರೈಸ್ತ, ಜೈನ, ಫಾರ್ಸಿ ಮತ್ತು ಈ ದೇಶದಲ್ಲಿ ಸಾವಿರಾರು ವರ್ಷಗಳಿಂದ ಬಾಳುತ್ತಾ ಬಂದಿರುವಂತಹ ಇತರ ಎಲ್ಲ ಧರ್ಮಾನುಯಾಯಿಗಳ ದೇಶವೆಂದು ಭಾವಿಸಬೇಕು. ನಮ್ಮ ದೇಶದಲ್ಲಿ ಎಲ್ಲ ಧರ್ಮಗಳ ಎಲ್ಲ ವಿಭಾಗಗಳಿಗೂ ಸಮಾನ ಹಕ್ಕು ದೊರೆಯಬೇಕು.

2. ನಮ್ಮ ಧರ್ಮ, ರೀತಿ-ರೀವಾಜು, ಮೌಲ್ಯ ಮತ್ತು ಪರಂಪರೆಯನ್ನು ಬಲವಂತವಾಗಿ ಇತರರ ಮೇಲೆ ಹೇರಬಾರದು. ಇತರರ ಆರಾಧನಾಲಯ, ಧಾರ್ಮಿಕ ವ್ಯಕ್ತಿತ್ವ, ಗ್ರಂಥಗಳು, ಪರಂಪರೆಗಳು, ಉತ್ಸವಗಳು ಮತ್ತು ಪದ್ಧತಿಗಳನ್ನು ಗೌರವಿಸಬೇಕು.

ಇತರರ ಧರ್ಮ, ಧಾರ್ಮಿಕ ಪರಂಪರೆ ಮತ್ತು ವ್ಯಕ್ತಿತ್ವಗಳನ್ನು ಗೌರವಿಸುವುದು ಎಂದರೆ ನಾವು ನಮ್ಮ ಧಾರ್ಮಿಕ ವಿಷಯಗಳ ಮೇಲೆ ಸಂಶಯ ತಾಳುವುದು ಎಂದು ಖಂಡಿತ ಅರ್ಥ ವಲ್ಲ. ಹಾಗೆಯೇ ಪ್ರತಿಯೊಂದು ಧರ್ಮವನ್ನೂ ಸಮಾನವೆಂದು ಭಾವಿಸುವುದೋ ಅಥವಾ ಒಂದಕ್ಕೆ ಇನ್ನೊಂದಕ್ಕಿಂತ ಹೆಚ್ಚು ಮಹತ್ವ ನೀಡುವುದೋ ಅಥವಾ ಯಾವುದಾದರೂ ಒಂದು ವಿಷಯವು ಸರಿಯೆಂದೂ ಇನ್ನೊಂದು ತಪ್ಪೆಂದೂ ಅರ್ಥವಲ್ಲ. ಪ್ರತಿಯೋರ್ವ ವ್ಯಕ್ತಿಗೂ ತನ್ನ ವಿಷಯ ಸರಿ ಮತ್ತು ಇತರರಲ್ಲಿರುವುದು ತಪ್ಪು ಎಂದು ಭಾವಿಸುವ ಸಂಪೂರ್ಣ ಸ್ವಾತಂತ್ರ್ಯ ವಿದೆ. ಆದರೆ ಇತರರ ವಿಷಯಗಳನ್ನು ಅವಮಾನಿಸುವ ಹಕ್ಕು ಖಂಡಿತ ಯಾರಿಗೂ ಇಲ್ಲ.

3. ಪ್ರತಿಯೋರ್ವ ಮಾನವನೂ ಯಾವುದೇ ಧರ್ಮದಲ್ಲಿ ವಿಶ್ವಾಸವಿರಿಸುವ ಅಥವಾ ಅದನ್ನು ತೊರೆದು ಇತರ ಧರ್ಮವನ್ನು ಅಂಗೀಕರಿಸುವ ಸ್ವಾತಂತ್ರ್ಯವನ್ನು ಹೊಂದಿದ್ದಾನೆಂಬುದನ್ನು ನಾವು ಮನಗಾಣಬೇಕು. ಆತನಿಗೆ ತನ್ನ ವಿಚಾರ ಮತ್ತು ದೃಷ್ಟಿಕೋನವನ್ನು ಸಾಮಾನ್ಯ ನೈತಿಕ ನಿಯಮಗಳ ಹಾಗೂ ಪ್ರಜಾಪ್ರಭುತ್ವದ ಮೇರೆಯೊಳಗಿದ್ದುಕೊಂಡು, ಪ್ರಕಟಪಡಿಸುವ ಹಕ್ಕು ಇದೆ ಎಂಬುದನ್ನು ನಾವು ಮನಗಾಣಬೇಕಾಗಿದೆ. ಹಾಗೆಯೇ ಎಲ್ಲರೂ ತಮ್ಮ ಧರ್ಮದ ಉದ್ಧಾರಕ್ಕಾಗಿ, ಪ್ರಚಾರ-ಪ್ರಸಾರದ ಸಕಲ ಮಾಧ್ಯಮ(ಮುದ್ರಣ, ಶ್ರವಣ, ದೃಶ್ಯ)ಗಳನ್ನು ಬಳಸುವ, ಪುಸ್ತಕ ಪ್ರಕಟಿಸುವ ಹಾಗೂ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವ ಸಮಾನ ಹಕ್ಕನ್ನು ಹೊಂದಿದ್ದಾರೆ ಎಂಬುದನ್ನೂ ನಾವು ಒಪ್ಪಬೇಕು.

4. ಕೊನೆಯದಾಗಿ, ನಾವು ನಮ್ಮ ಧರ್ಮದ ಸಾಮಾನ್ಯ ಮಾನವೀಯ ಮೌಲ್ಯಗಳನ್ನು ಮರೆಯಬಾರದು. ಅವುಗಳನ್ನು ನಮ್ಮ ಧರ್ಮದ ಮೂಲ ಮತ್ತು ಮಹತ್ವಪೂರ್ಣ ಭಾಗವೆಂದು ಭಾವಿಸಬೇಕು. ಅವುಗಳ ಆಧಾರದಲ್ಲಿ ಧರ್ಮ ಮತ್ತು ಸಮುದಾಯಗಳ ಭೇದವಿಲ್ಲದೆ ಪ್ರತಿಯೋರ್ವ ಮಾನವನೊಡನೆ ವ್ಯವಹರಿಸಬೇಕು. ಮಾನವ ಸೇವೆ ಮತ್ತು ಪ್ರೀತಿಯನ್ನು ನಮ್ಮ ಕರ್ತವ್ಯವೆಂದು ಭಾವಿಸಬೇಕು. ಯಾವನೇ ಮಾನವನ ಮೇಲೆ ಅಕ್ರಮ, ದೌರ್ಜನ್ಯ ನಡೆಸುವುದನ್ನು ಮಹಾ ಪಾಪವೆಂದು ಭಾವಿಸಬೇಕು. ಯಾರನ್ನಾದರೂ ವಿನಾ ಕಾರಣ ಪೀಡಿಸಿ, ಆತನನ್ನು ಆತನ ಅರ್ಹ ಹಕ್ಕುಗಳಿಂದ ವಂಚಿಸಿ, ಅವನ ಜೀವ-ಸೊತ್ತು-ಮಾನ ಹರಣಗೈಯುವುದರಿಂದ ನಾವು ಸ್ವಯಂ ನಮ್ಮ ಸೇವೆಯನ್ನೋ ನಮ್ಮ ಧರ್ಮದ ಸೇವೆಯನ್ನೋ ಅಥವಾ ನಮ್ಮ ದೇಶದ ಸೇವೆಯನ್ನೋ ಮಾಡಲಾರೆವು ಎಂಬುದನ್ನು ಗಮನದಲ್ಲಿರಿಸಬೇಕು. ಹಕ್ಕು-ನ್ಯಾಯದ ವಿರುದ್ಧ ನಮ್ಮ ಪ್ರತಿಯೊಂದು ಹೆಜ್ಜೆಯೂ ಮಾನವೀಯ, ನೈತಿಕ, ಧಾರ್ಮಿಕ ಮತ್ತು ಆಧ್ಯಾತ್ಮಿಕ ದೃಷ್ಟಿಯಲ್ಲಿ ತಪ್ಪು ಮಾತ್ರವಲ್ಲ, ಮುಕ್ತಿಯ ಹಾದಿಯಲ್ಲಿ ಬಲುದೊಡ್ಡ ತೊಡಕಾಗಿದೆ.

ಒಂದು ವೇಳೆ ಪ್ರತಿಯೋರ್ವ ಧಾರ್ಮಿಕ ವ್ಯಕ್ತಿಯೂ ತನ್ನ ಧರ್ಮದಲ್ಲಿರುವ ಒಳ್ಳೆಯ ಬೋಧನೆಗಳನ್ನು ಹೃತ್ಪೂರ್ವಕ ಅಂಗೀಕರಿಸಿ, ಅವುಗಳನ್ನು ಸ್ವಯಂ ಅನುಸರಿಸುತ್ತಾ, ತನ್ನ ಸಮುದಾಯ ಬಾಂಧವರಿಗೂ ಉಪದೇಶಿಸಿದರೆ, ನಾವು ಖಂಡಿತ ವಾಗಿಯೂ ಒಂದು ಉತ್ತಮ, ಪ್ರಬಲ, ಶಾಂತಿಯುತ ಮತ್ತು ಸಭ್ಯ ಸಮಾಜ ನಿರ್ಮಿಸುವಲ್ಲಿ ಯಶಸ್ವಿಯಾಗುವೆವು ಎಂಬ ವಿಶ್ವಾಸ ನನಗಿದೆ. ಇದರ ಹೊರತು ಬೇರೆ ಯಾವುದೇ ವಿಷಯದ ಅಗತ್ಯ ನನಗೆ ಕಾಣುವುದಿಲ್ಲ.

# ರಾಷ್ಟ್ರೀಯ ಭಾವೈಕ್ಯಕ್ಕೆ ಇಸ್ಲಾಮಿನ ಕೊಡುಗೆ

ರಾಷ್ಟ್ರೀಯ ಭಾವೈಕ್ಯ, ಸೌಹಾರ್ದತೆ ಮತ್ತು ಒಗ್ಗಟ್ಟಿನ ಈ ಎಲ್ಲ ಬೇಡಿಕೆಗಳನ್ನು ಇಸ್ಲಾಮ್ ಸಮರ್ಥಿಸುತ್ತದೆ. ಇಸ್ಲಾಮೀ ದೃಷ್ಟಿಕೋನದಲ್ಲಿ, ಸಕಲ ಧರ್ಮಗಳೂ ಸಮಾನ ಸನ್ಮಾನ ಮತ್ತು ಗೌರವಕ್ಕೆ ಅರ್ಹವಾಗಿವೆ. ಅನ್ಯಧರ್ಮಗಳ ಆರಾಧನಾಲಯ, ಧಾರ್ಮಿಕ ವ್ಯಕ್ತಿತ್ವ ಮತ್ತು ಗ್ರಂಥ ಹಾಗೂ ರೀತಿ-ರಿವಾಜುಗಳನ್ನು ಗೌರವಿಸಬೇಕಾದುದು ಪ್ರತಿಯೋರ್ವ ಮುಸ್ಲಿಮನ ಕರ್ತವ್ಯವಾಗಿದೆ. ಅನ್ಯ ಧರ್ಮೀಯರ ಆರಾಧ್ಯರುಗಳನ್ನು ಮತ್ತು ಧಾರ್ಮಿಕ ವ್ಯಕ್ತಿತ್ವಗಳನ್ನು ಬಯ್ಯುವುದು, ಧಾರ್ಮಿಕ ಗ್ರಂಥಕ್ಕೆ ಅನಾದರ ತೋರುವುದು ಇಸ್ಲಾಮಿನ ದೃಷ್ಟಿಯಲ್ಲಿ ಮಹಾಪಾಪವಾಗಿದೆ. ಈ ಕೃತ್ಯವನ್ನು ಯಾರಾದರೂ ಇಂದು ಮಾಡಿರಲಿ ಅಥವಾ ಇತಿಹಾಸದಲ್ಲೆಂದೋ ಮಾಡಿರಲಿ ಅದು ಪಾಪವೇ ಸರಿ. ಹಾಗೆ ವರ್ತಿಸುವವನು ಪಾಪಿಯೆನಿಸುತ್ತಾನೆ. ಆತ ಆ ಕೃತ್ಯವನ್ನು ಯಾವ ಭಾವನೆಯಿಂದ ಮಾಡಿದರೂ ಸರಿಯೇ. ಯಾವ ಕೃತ್ಯವು ಇಸ್ಲಾಮಿನ ಸಿದ್ಧಾಂತಕ್ಕೆ ವಿರುದ್ಧವೋ ಅದನ್ನು ಇಸ್ಲಾಮಿನ ಹೆಸರಲ್ಲಿ ಎಸಗಿದರೆ, ಅದೆಂದೂ ಇಸ್ಲಾಮಿನ ಸೇವೆಯೆನಿಸಲಾರದು. ಬದಲಾಗಿ ಅದು ಇಸ್ಲಾಮಿನ ಅವಹೇಳನವಾಗಿದೆ. ಈ ನಿಟ್ಟಿನಲ್ಲಿ ಪವಿತ್ರ ಕುರ್‌ಆನ್ ಮತ್ತು ಹದೀಸ್‌ಗಳಲ್ಲಿ ಸ್ಪಷ್ಟ ಆದೇಶವಿದೆ. ಇಸ್ಲಾಮೀ ಕಾನೂನಿನಲ್ಲಿ ಈ ಸಂಬಂಧವಾಗಿ ಸ್ಪಷ್ಟ ವಿಧಿಗಳಿವೆ. ಯಾರೋ ಮುಸ್ಲಿಮ್ ರಾಜನ ಕರ್ಮದಿಂದಲೋ ಕಾಝಿಯ ತೀರ್ಪಿನಿಂದಲೋ ಶಾಸನಾಧಿಕಾರಿಯ ಆದೇಶದಿಂದಲೋ ಅಥವಾ ಮುಫ್ತಿಯ ಫತ್ವಾದಿಂದಲೋ ಈ ಸಿದ್ಧಾಂತದಲ್ಲಿ ಯಾವುದೇ ಬದಲಾವಣೆ ಆಗಲು ಸಾಧ್ಯವೇ ಇಲ್ಲ.

ಪ್ರತಿಯೋರ್ವ ವ್ಯಕ್ತಿಗೂ ಅಧಿಕಾರ ಮತ್ತು ಆಯ್ಕೆಯ ಸ್ವಾತಂತ್ರ್ಯವನ್ನು ಇಸ್ಲಾಮ್ ನೀಡಿದೆ. ಪ್ರತಿಯೊಂದು ಧರ್ಮದ ಅನುಯಾಯಿಗಳಿಗೆ ಅವರವರ ಧರ್ಮದಲ್ಲಿ ಸ್ಥಿರವಾಗಿರುವ, ತನ್ನ ಧರ್ಮದ ಪ್ರಚಾರ ಮಾಡುವ, ಅದಕ್ಕಾಗಿ ಶಾಲೆ ತೆರೆಯಲು, ಪತ್ರಿಕೆ ಹಾಗೂ ನಿಯತಕಾಲಿಕಗಳನ್ನು ಹೊರಡಿಸುವ, ಪುಸ್ತಕ ಪ್ರಕಾಶಿಸುವ ಹಕ್ಕು ಮತ್ತು ಅಧಿಕಾರ ವಿದೆಯೆಂದು ಇಸ್ಲಾಮ್ ಸಾರುತ್ತದೆ. ಧರ್ಮ ಪರಿವರ್ತನೆಗಾಗಿ ಬಲವಂತಪಡಿಸುವುದನ್ನು ಇಸ್ಲಾಮ್ ನಿಷೇಧಿಸಿದೆ. "ಧರ್ಮದ ವಿಷಯದಲ್ಲಿ ಯಾವುದೇ ಒತ್ತಾಯ, ಬಲಾತ್ಕಾರವಿಲ್ಲ." (2:256) ಎಂದು ಪವಿತ್ರ ಕುರ್‌ಆನ್ ಆದೇಶಿಸುತ್ತದೆ. ಧರ್ಮಗಳ ರೀತಿ-ರಿವಾಜು ಮತ್ತು ಉತ್ಸವ, ಸಂಘಟನೆ ಮತ್ತು ವೈಯಕ್ತಿಕ ಕಾನೂನುಗಳ ಮೇಲೆ ಯಾವುದೇ ಹಸ್ತಕ್ಷೇಪ ನಡೆಸುವುದನ್ನು ಇಸ್ಲಾಮ್ ಇಷ್ಟಪಡುವುದಿಲ್ಲ. ಮುಸ್ಲಿಮ್ ಆಡಳಿತಗಾರರು ಇಸ್ಲಾಮೀ ಶಿಕ್ಷಣದ ಬೇಡಿಕೆ ಎಂದು ಭಾವಿಸಿ, ತಮ್ಮ ಪ್ರಜೆಗಳಿಗೆ ಅವರವರ ಧಾರ್ಮಿಕ ವಿಷಯಗಳಲ್ಲಿ

ಸಂಪೂರ್ಣ ಸ್ವಾತಂತ್ರ್ಯ ನೀಡಿದ್ದರು. ಅವರ ವೈಯಕ್ತಿಕ ಕಾನೂನುಗಳನ್ನು ಗೌರವಿಸಿದ್ದರು. ಅವುಗಳನ್ನು ಜಾರಿಗೊಳಿಸಲಿಕ್ಕಾಗಿ ಅವರದೇ ಅಧಿಕಾರಿಗಳನ್ನು ನೇಮಿಸಿದ್ದರು. ಅವರ ವ್ಯಾಜ್ಯಗಳಲ್ಲಿ ತೀರ್ಪು ನೀಡಲಿಕ್ಕಾಗಿ ಅವರದೇ ನ್ಯಾಯಾಧೀಶರನ್ನು ನಿಯುಕ್ತ ಗೊಳಿಸಿದ್ದರು. ಈ ಕಾರ್ಯ ನೀತಿಯು ಇಸ್ಲಾಮಿ ಶಿಕ್ಷಣ ಮತ್ತು ಪರಂಪರೆಗಳಿಗೆ ಅನುಗುಣವಾಗಿಯೇ ಇತ್ತು. ಅದರ ಹೊರತು ಬೇರೆ ಯಾವುದೇ ವ್ಯವಸ್ಥೆ ಕಂಡಿದ್ದರೆ, ಅದು ಅನಿಸ್ಲಾಮಿಕವಾಗಿದ್ದು, ತಪ್ಪು ಕಲ್ಪನೆಗಳಿಂದ ಕೂಡಿದ್ದಾಗಿದೆ.

ಪ್ರತಿಯೋರ್ವ ಮಾನವನನ್ನು ಒಂದೇ ಮಾತಾಪಿತರ ಸಂತಾನವೆಂದು ಇಸ್ಲಾಮ್ ಬೋಧಿಸುತ್ತದೆ. ಸಕಲ ಮಾನವರನ್ನು ಸಹೋದರರೆಂದೂ ಸರ್ವ ಸಮಾನರೆಂದೂ ಸಾರುತ್ತದೆ. ಇದು ಕೇವಲ ಮುಸ್ಲಿಮರಿಗೆ ಮಾತ್ರ ಸೀಮಿತವಲ್ಲ. ಬದಲಾಗಿ ಪ್ರತಿಯೊಂದು ಧರ್ಮ, ಸಮುದಾಯ, ದೇಶ ಮತ್ತು ವರ್ಗದ ವ್ಯಕ್ತಿಯೂ ಇತರರಿಗೆ ಸಹೋದರ ಹಾಗೂ ಸಮಾನನಾಗಿದ್ದಾನೆ. ಮಾನವರೆಂಬ ನೆಲೆಯಲ್ಲಿ ಎಲ್ಲರ ಜೀವ-ಸೊತ್ತು-ಮಾನ, ಪಂಥ, ಧರ್ಮವು ಸಮಾನ ರೂಪದಲ್ಲಿ ಗೌರವಾರ್ಹವಾಗಿದೆ. ಅವನ್ನು ರಕ್ಷಿಸುವುದು ಪ್ರತಿಯೋರ್ವ ಮುಸ್ಲಿಮನ ಕರ್ತವ್ಯವಾಗಿದೆ. ಪ್ರತಿಯೊಂದು ಅಕ್ರಮವನ್ನೂ ಇಸ್ಲಾಮ್ ಅಕ್ರಮವೆಂದೇ ಸಾರಿದೆ. ಅದು ಯಾರದೇ ವಿರುದ್ಧ, ಯಾವುದೇ ಭಾವನೆಯಿಂದ ಎಸಗಿದ್ದಾಗಿರಲಿ.

ಇಡೀ ಮಾನವಕುಲವನ್ನು, 'ಅಯಾಲುಲ್ಲಾಹ್' (ಅಲ್ಲಾಹನ ಕುಟುಂಬ) ಎಂದು ಇಸ್ಲಾಮ್ ಹೇಳುತ್ತದೆ. ಮುಸ್ಲಿಮ್-ಮುಸ್ಲಿಮೇತರನೆಂಬ ಭೇದವಿಲ್ಲದೆ ಪ್ರತಿಯೋರ್ವ ಮಾನವನ ಸೇವೆಯನ್ನೂ ದೇವೋಪಾಸನೆ ಎನ್ನುತ್ತದೆ. ತನ್ನ ನೆರೆಕರೆ, ಊರು-ಕೇರಿ ಮತ್ತು ದೇಶದ ಜನರ ಹಕ್ಕುಗಳನ್ನು ಇತರರಿಗಿಂತ ಮಿಗಿಲೆಂದು ಇಸ್ಲಾಮ್ ಸಾರುತ್ತದೆ. ತ್ಯಾಗ-ಬಲಿದಾನ, ಔದಾರ್ಯ, ಸದ್ವ್ಯವಹಾರವನ್ನು ಯಾವ ಮಾನವನೊಂದಿಗೆ ತೋರಿದರೂ ಇಸ್ಲಾಮಿನ ದೃಷ್ಟಿಯಲ್ಲಿ ಅದು ಬಹಳಷ್ಟು ಆರಾಧನೆ ಉಪಾಸನೆಗಳಿಗಿಂತ ಮಿಗಿಲಾಗಿದೆ. ಅಷ್ಟೇ ಅಲ್ಲ. ಅದನ್ನು ದೇವಪ್ರೇಮ ಮತ್ತು ದೇವ ಸಾಮೀಪ್ಯ ಗಳಿಸುವ ಸಾಧನವೆಂದು ಇಸ್ಲಾಮ್ ಕಲಿಸುತ್ತದೆ.

ಸಹೋದರರೇ,

ಈ ಎಲ್ಲ ವಿಷಯಗಳ ಸಮರ್ಥನೆಯಲ್ಲಿ ಪವಿತ್ರ ಕುರ್‌ಆನ್ ಮತ್ತು ಪ್ರವಾದಿ ವಚನಗಳಿಂದ ಕೆಲವು ಅಣಿಮುತ್ತುಗಳನ್ನು ಉಲ್ಲೇಖಿಸುವುದು ಉಚಿತವೆನಿಸುತ್ತದೆ. ಈ ಮಾತುಗಳಿಂದಲೇ ನನ್ನ ಮಾತನ್ನು ಕೊನೆಗೊಳಿಸುತ್ತೇನೆ.

● ಜನರೇ, ಪರಸ್ಪರ ಕೆಟ್ಟ ಗುಮಾನಿಯನ್ನಿರಿಸದಿರಿ. ಪರಸ್ಪರರ ತಪ್ಪುಗಳನ್ನು ಹುಡುಕದಿರಿ. ಇತರರನ್ನು ಪರಸ್ಪರ ಜಗಳಾಡಿಸದಿರಿ. ಪರಸ್ಪರ ಅಸೂಯೆಪಡದಿರಿ. ದ್ವೇಷದಿಂದ ದೂರವಿರಿ. ನೀವು ಅಲ್ಲಾಹನ ದಾಸರಾಗಿರಿ ಮತ್ತು ಪರಸ್ಪರ ಸಹೋದರರಾಗಿ ಬಾಳಿರಿ. (ಹದೀಸ್)

● ಯಾರ ಕೃತ್ಯದಿಂದ ಅವನ ನೆರೆಯವರು ಸುರಕ್ಷಿತರಲ್ಲವೋ ಆತ ವಿಶ್ವಾಸಿಯಲ್ಲ. (ಹದೀಸ್)

● ಒಬ್ಬನು ಅಕ್ರಮಿಯೆಂದು ತಿಳಿದಿರುತ್ತಾ ಅವನೊಡನೆ ಸಹಕರಿಸದಿರಿ. (ಹದೀಸ್)

● ನಿಮ್ಮ ಗೆಳೆತನ ಮತ್ತು ಹಗೆತನಗಳು ಅಲ್ಲಾಹನಿಗಾಗಿರಲಿ. (ಹದೀಸ್)

● ಅನುಚಿತ ವಿಷಯಗಳಲ್ಲಿ ನಿಮ್ಮ ಜನಾಂಗಕ್ಕೆ ಸಹಕರಿಸುವುದೆಂದರೆ, ಬಾವಿಗೆ ಬೀಳುತ್ತಿರುವ ಒಂಟೆಯ ಬಾಲ ಹಿಡಿದವನಂತಾಗುವುದಾಗಿದೆ. ಒಂಟೆಯೊಂದಿಗೆ ನೀವೂ ಬೀಳುವಿರಿ. (ಹದೀಸ್)

● ಒಂದು ಜನಾಂಗದೊಂದಿಗಿನ ವೈರವು ನಿಮ್ಮನ್ನು ಅನ್ಯಾಯಕ್ಕೆ ಪ್ರೇರೇಪಿಸದಿರಲಿ. ನ್ಯಾಯ ಪಾಲಿಸಿರಿ. ಅದುವೇ ಧರ್ಮನಿಷ್ಠೆಗೆ ಅತಿ ನಿಕಟವಾದುದಾಗಿದೆ. (ಪವಿತ್ರ ಕುರ್‌ಆನ್)

● ಧರ್ಮದ ವಿಷಯದಲ್ಲಿ ಯಾವುದೇ ಒತ್ತಾಯ ಬಲಾತ್ಕಾರವಿಲ್ಲ. (ಪವಿತ್ರ ಕುರ್‌ಆನ್)

● ಜನರು ಅಲ್ಲಾಹನ ಹೊರತು ಯಾವುದನ್ನು ಕರೆದು ಪ್ರಾರ್ಥಿಸುತ್ತಾರೋ ಅವುಗಳನ್ನು ಹಳಿಯದಿರಿ. (ಪವಿತ್ರ ಕುರ್‌ಆನ್)

● ನೀವು ಸ್ವಂತಕ್ಕಾಗಿ ಏನನ್ನು ಇಷ್ಟಪಡುತ್ತೀರೋ ಅದನ್ನೇ ಇತರರಿಗಾಗಿಯೂ ಇಷ್ಟಪಡಿರಿ. (ಹದೀಸ್)

● ನಾನು ನಿಮಗೆ, ಅಲ್ಲಾಹನ ಆಜ್ಞೋಲ್ಲಂಘನೆಯಿಂದ ದೂರವಿರಲು, ಸತ್ಯವನ್ನೇ ನುಡಿಯಲು, ವಾಗ್ದಾನವನ್ನು ಪಾಲಿಸಲು, ಅಮಾನತನ್ನು ಮರಳಿಸಲು, ಅಪ್ರಾಮಾಣಿಕತೆಯನ್ನು ತೊರೆಯಲು, ಅನಾಥರ ಮೇಲೆ ದಯೆ ತೋರಲು, ನೆರೆಕರೆಯವರ ಹಕ್ಕನ್ನು ತೀರಿಸಲು, ಕೋಪವನ್ನು ನುಂಗಲು, ಜನರೊಡನೆ ನಮ್ರತೆಯಿಂದ ವ್ಯವಹರಿಸಲು ಮತ್ತು ಅವರ ಕ್ಷೇಮಕ್ಕಾಗಿ ಪ್ರಾರ್ಥಿಸಲು ವಸಿಯ್ಯತ್ (ಉಪದೇಶ) ಮಾಡುತ್ತಿದ್ದೇನೆ. (ಹದೀಸ್)

● ನೀವು ಉತ್ತಮ ಸಮುದಾಯವಾಗಿದ್ದೀರಿ. ನಿಮ್ಮನ್ನು ಜನರ ಒಳಿತಿಗಾಗಿ ಎಬ್ಬಿಸಲಾಗಿದೆ. ಒಳಿತನ್ನು ಆಜ್ಞಾಪಿಸುವುದು ಮತ್ತು ಕೆಡುಕನ್ನು ವಿರೋಧಿಸುವುದು ನಿಮ್ಮ ಕರ್ತವ್ಯವಾಗಿದೆ. (ಕುರ್‌ಆನ್)

● ಒಳಿತು ಮತ್ತು ಧರ್ಮ ನಿಷ್ಠೆಯ ಕೆಲಸಗಳಲ್ಲಿ ಸಹಕರಿಸಿರಿ. ಕೆಡುಕು ಮತ್ತು ಅಕ್ರಮಗಳಲ್ಲಿ ಸಹಕರಿಸದಿರಿ. (ಕುರ್‌ಆನ್)

